# ರತ್ನ ಕಿರೀಟ

ಎರಡು ಸಾವಿರ ವರ್ಷಗಳ ಹಿಂದೆ, ಬ್ರಹ್ಮಪುತ್ರಾ ನದೀ ಪ್ರಾಂತದಲ್ಲಿ ಭಲ್ಲಾಣವೆಂಬ ರಾಜ್ಯವು ಬಹಳ ಪ್ರಸಿದ್ಧವಾಗಿತ್ತು. ಪ್ರಮೋದನೆಂಬ ದೊರೆ ಅದನ್ನು ಪಾಲಿಸುತ್ತಿದ್ದನು. ಪ್ರಮೋದನು ಧೀರ-ವೀರ ಪರಾಕ್ರಮಗಳಲ್ಲಿ ತುಂಬಾ ಪ್ರಖ್ಯಾತನಾಗಿದ್ದನು. ಅವನ ಪಾಲನೆಯಲ್ಲಿ ಪ್ರಜೆಗಳೆಲ್ಲಾ ಬಹಳ ಸುಖವಾಗಿದ್ದರು.

ಯಾವ ಕೊರತೆಯೂ ಇಲ್ಲದೆ ತೃಪ್ತರಾಗಿರುವ ಪ್ರಜೆಗಳನ್ನೆಲ್ಲಾ ಒಂದೇ ಒಂದು ಚಿಂತೆ ಮಾತ್ರ ಬಾಧಿಸುತ್ತಿತ್ತು. ಪ್ರಮೋದನು ಅವಿವಾಹಿತನಾಗಿದ್ದನು. ಏನು ಕಾರಣವೋ ಯಾರಿಗೂ ತಿಳಿಯದು; ಪ್ರಮೋದನು ತನ್ನ ಮದುವೆಗೆ ಮಾತ್ರ ಒಡಂಬಡಲೇ ಇಲ್ಲ. ಇದೇ ಪ್ರಜೆಗಳ ಚಿಂತೆಗೆ ಕಾರಣ.

ಪ್ರಜೆಗಳಲ್ಲಿ ಕೆಲವು ಮುಖ್ಯಸ್ಥರು ಸುಮ್ಮನಿರಲಿಲ್ಲ. ಹಿರಿಯರು ಹತ್ತು ಮಂದಿ ಕೂಡಿ, ಚರ್ಚೆ ಮಾಡಿದರು. ಬಳಿಕ ಹತ್ತು ಯೋಜನ ದೂರದಲ್ಲಿರುವ ಬೆಟ್ಟದ ಮೇಲೆ ತಪಸ್ಸು ಮಾಡುತ್ತಿರುವ ಒಬ್ಬ ಮಹರ್ಷಿಯ ಬಳಿಗೆ ಹೋದರು. ತಮ್ಮ ಚಿಂತೆಯನ್ನು ಹೇಳಿಕೊಂಡರು. ತ್ರಿಕಾಲವೇದಿಯಾದ ಆ ಮಹಾನುಭಾವನು ಒಂದು ಹಣ್ಣನ್ನು ಮಂತ್ರಿಸಿ ಅವರಿಗೆ ಕೊಟ್ಟು, "ಈ ಹಣ್ಣು ನಿಮ್ಮ ರಾಜನ ಹೊಟ್ಟೆಯೊಳಗೆ ಹೋಗಲಿ. ಕಲ್ಯಾಣವಾಗುವುದು." ಎಂದು ಹೇಳಿ ಕಳುಹಿಸಿಕೊಟ್ಟನು.

ಅವರು ಉತ್ಸಾಹದಿಂದ ಹಿಂದಿರುಗಿದರು. ಪ್ರಮೋದನು ಫಲಹಾರ ಮಾಡುವಾಗ ಆ ಹಣ್ಣನ್ನು ಕೂಡಾ ಅದರೊಂದಿಗೆ ಸೇರಿಸಿಬಿಟ್ಟರು. ರಾಜನೂ ತಿಂದನು.

ಆ ದಿನ ರಾತ್ರಿ ಊರೆಲ್ಲಾ ನಿಶ್ಶಬ್ದವಾಗಿತ್ತು. ನಿದ್ರೆ ಮಾಡುತ್ತಿದ್ದ ಪ್ರಮೋದನ ಕಿವಿಗಳಿಗೆ ತುಂಬಾ ಇಂಪಾದ ಮಧುರ ಗಾನವೊಂದು ಕೇಳಿಬರತೊಡಗಿತು. ಅರಸನು ಕುತೂಹಲದಿಂದ ಎದ್ದನು. ಯಾರಿಗೂ ಹೇಳದೆ



ತಾನೊಬ್ಬನೇ ಹೊರಟು, ಕೋಟೆಯಿಳಿದು, ಆ ಗಾಯನವು ಬರುವ ಕಡೆಗೆ ನಡೆದನು.

ಅಲ್ಲೊಂದು ರಮಣೀಯವಾದ ತೋಟ. ಅದರ ನಡುವೆ ಸುಂದರವಾದೊಂದು ಕೊಳ. ಆ ಕೊಳದ ದಂಡೆಯಲ್ಲಿ ಸುಂದರಿಯಾದ ಗಂಧರ್ವ ಕನ್ಯೆಯೊಬ್ಬಳು ಕುಳಿತುಕೊಂಡು ವೀಣೆ ಬಾರಿಸುತ್ತಿದ್ದಾಳೆ. ಅವಳ ಸುತ್ತೂ ಹತ್ತುಮಂದಿ ಪರಿಚಾರಿಕೆಯರೂ ಇದ್ದರು.

ಆ ಗಂಧರ್ವ ಕನ್ಯೆಯನ್ನು ನೋಡುತ್ತಲೇ ಪ್ರಮೋದನು ಹೇಗಾದರೂ ಇವಳನ್ನೇ ವಿವಾಹ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿಕೊಂಡನು. ಆ ಹಣ್ಣಿನ ಮಹಿಮೆ ಅಂತಹದು. ಅದನ್ನು ತಿಂದ ದಿನ ಮೊತ್ತ ಮೊದಲು ಯಾವ ಕನ್ಯೆ ಕಣ್ಣಿಗೆ ಬೀಳುವಳೋ, ಅವಳನ್ನೆ ಮದುವೆಯಾಗಬೇಕೆಂಬ ಇಚ್ಛೆಯುಂಟಾಗುತ್ತದೆ. ಗಂಧರ್ವ ಕನ್ಯೆಯೊಂದಿಗೆ ಮಾನವ ರಾಯನ ಮದುವೆಯಾಗುವುದರಿಂದ, ಏನಾಗುವುದೋ ಎಂದು ಯಾರೆಷ್ಟು ಹೇಳಿದರೂ ಪ್ರಮೋದನು ಕೇಳಲಿಲ್ಲ. ಕಡೆಗೆ ಆ ಗಂಧರ್ವ ಕನ್ಯೆಯೊಂದಿಗೇ ಪ್ರಮೋದನ ಮದುವೆ ಅತಿ ವೈಭವದಿಂದ ಜರುಗಿಹೋಯಿತು. ಎಲ್ಲರೂ 'ಆ ಋಷಿಯ ಕೃಪೆ' ಎಂದುಕೊಂಡರು.

ಮೂರು ವರುಷದಲ್ಲಿಯೇ ಅವರಿಗೊಬ್ಬ ಕುಮಾರನು ಜನಿಸಿದನು. ಆ ಮಗುವಿಗೆ 'ಮಹೀಪಾಲ' ನೆಂದು ನಾಮಕರಣ ಮಾಡಿದರು. ಬಹಳ ಮುದ್ದಿನಿಂದ ಆ ಮಗುವನ್ನು ಬೆಳೆಸುತ್ತಿದ್ದರು. ಬಹಳ ಸಂತೋಷದಿಂದ ಕಾಲವು ಹೋಗುತ್ತಿತ್ತು.

ಹೀಗಿರಲು ಒಂದು ದಿನ ಪ್ರಮೋದನು ಮಾಮೂಲಿನಂತೆ ಬೇಟೆಗೆ ಹೋದನು. ಆ ದಿನ ವಿಶೇಷವಾದ ಮೃಗಗಳೊಂದೂ ಅವನಿಗೆ ದೊರಕಲಿಲ್ಲ. ಆದುದರಿಂದ ಕಾಡಿನೊಳಗೆಲ್ಲಾ ಬಹು ದೂರದವರೆಗೆ ಹುಡುಕುತ್ತಾ ಹೋದನು. ಮಿತಿ ಮೀರಿದ ನಡಿಗೆಯಿಂದ ತುಂಬಾ ಬಳಲಿದನು. ದಾಹವಾಯಿತು, ನೀರಿಗಾಗಿ ಅತ್ತಿತ್ತ ನೋಡಿದನು. ಸ್ವಲ್ಪದೂರದಲ್ಲಿ ಒಂದು ಕುಟೀರವು ತೋರಿತು. ಅದು ಕಾಡುಗಳ ಅರಸನಾದ ಕಿರಾತ ರಾಜನ ನಿವಾಸ. ಅಂದ ಚಂದವಾಗಿ ತೋರುವ ಆ ಕುಟೀರದಲ್ಲಿ ಬಲು ಚಲುವೆಯಾದ ಹುಡುಗಿಯೊಬ್ಬಳು ಇದ್ದಳು. ಅವಳು ಕಿರಾತ ರಾಜನ ಮಗಳು ಮಂದಾಕಿನಿ.




ಪ್ರಮೋದನಿಗೆ ಸೀರನ್ನು ತಂದುಕೊಟ್ಟ ಆ ಸುಂದರಿ ಮಂದಾಕಿನಿಯನ್ನು ನೋಡುತ್ತಲೇ ಇವಳನ್ನೂ ಮದುವೆ ಮಾಡಿಕೊಳ್ಳಬೇಕೆಂದು ಅರಸನಿಗೆ ಬುದ್ಧಿ ಹುಟ್ಟಬಿಟ್ಟಿತು. ಕೇಳುವುದಾರು? ಹೇಳುವುದಾರು? ಪ್ರಮೋದನು ಕೂಡಲೇ ಕಿರಾತ ರಾಜನೊಡನೆ ಪ್ರಸ್ತಾವಿಸಿದನು. ಅಲ್ಲಿಯೇ ಅವಳನ್ನು ವರಿಸಿಕೊಂಡೂಬಿಟ್ಟನು. ಬಳಿಕ ಅವಳೊಂದಿಗೆ ಹೊರಟು ತನ್ನ ರಾಜಧಾನಿಯನ್ನು ಸೇರಿದನು.

ಮಂದಾಕಿನಿ ಬಹಳ ಜಾಗರೂಕತೆಯಿಂದ ನಡೆಯುತ್ತಾ ಎಲ್ಲರಿಂದಲೂ 'ಒಳ್ಳೆಯ ರಾಣಿ' ಎನಿಸಿದಳು. ಅವಳನ್ನು ಕುರಿತು ಪ್ರಜೆಗಳು "ಮನುಷ್ಯರಿಗೆ ಗುಣವೇ ಪ್ರಧಾನವಲ್ಲದೆ ಕುಲವಲ್ಲ' ಎಂದು ತೃಪ್ತಿಪಟ್ಟರು. ತನ್ನ ದ್ವಿತೀಯ ವಿವಾಹದಿಂದ ಪ್ರಜೆಗಳು ಸಂತೃಪ್ತರಾಗಿಯೇ ಇರುವರೆಂದು ರಾಜನಿಗೂ ಸಮಾಧಾನ. ಹೀಗೆಯೇ ಸುಖವಾಗಿ ಕಾಲಕಳೆಯುತ್ತಿತ್ತು. ಕ್ರಮೇಣ ಚಿಕ್ಕರಾಣಿ ಮಂದಾಕಿನಿಗೂ ಒಬ್ಬ ಮಗನು ಹುಟ್ಟಿದನು.

ಮಗನು ಹುಟ್ಟಿದ ಮೇಲೆ ಮಾತ್ರ ಮಂದಾಕಿನಿ ಸ್ವಲ್ಪ ಸ್ವಲ್ಪವಾಗಿ ಬದಲಾಯಿಸುತ್ತಾ ಬಂದಳು. ಅಸೂಯೆ ತಲೆಹಾಕಿತು. ಗಂಧರ್ವ ಕಾಂತೆಯನ್ನು ಗೌರವಿಸುವುದನ್ನು ಬಿಟ್ಟಳು. ಹಿರಿಯ ಕುಮಾರ ಮಹೀಪಾಲನು ಕೂಡಾ ಚಿಕ್ಕ ರಾಣಿಯ ಕೈಯಲ್ಲಿ ನಾನಾ ಬಾಧೆಗಳನ್ನು ಪಡಲಾರಂಭಿಸಿದನು. ಅರಸನ ಪ್ರೀತಿಯ ಚಿಕ್ಕರಾಣಿ ಮಂದಾಕಿನಿಯು, ಈ ಬಗೆಯ ಬದಲಾವಣೆಯಿಂದ, ಇನ್ನೊಂದು ಮುಖ್ಯವಾದ ಘಟನೆಯಾಯಿತು. ಅದೇನೆಂದರೆ, ಗಂಧರ್ವ ರಾಣಿಯ ಹೃದಯಕ್ಕೆ ತುಂಬಾ ನೋವಾಯಿತು. "ಈಗ ಚಿಕ್ಕರಾಣಿಯ ಅಧಿಕಾರ ನಡೆಯುತ್ತಿದೆ. ರಾಜನು ಅವಳ ಇಷ್ಟಕ್ಕೆ ಇದಿರಾಡುವುದಿಲ್ಲ. ನನ್ನನ್ನೂ ಲಕ್ಷಿಸುವುದಿಲ್ಲ. ನನ್ನ ಮಾತಿಗೆ ಬೆಲೆ ಯಿಲ್ಲದಾಗ, ನಾನೇಕೆ ಇಲ್ಲಿ ಬಲವಂತವಾಗಿ ಬಿದ್ದು ಬಾಧೆ ಪಡಬೇಕು? ನನ್ನಿಂದ ಅವಳಿಗೇಕೆ ಬಾಧೆ? ಈಗ ಹೇಗಾದರೂ ಮುಂದೆ ಪಟ್ಟ ಕಟ್ಟಿಸಿಕೊಳ್ಳ ತಕ್ಕವನು ನನ್ನ ಕುಮಾರ ಮಹೀಪಾಲನೇ. ಇದು ಅರಸನಿಗೆ ಗೊತ್ತಿಲ್ಲವೋ ಪ್ರಜೆಗಳಿಗೆ ಗೊತ್ತಿಲ್ಲವೋ?" ಎಂದು ಯೋಚಿಸಿಕೊಂಡು, ಗಂಧರ್ವ ರಾಣಿ ಒಂದು ದಿನ ರಾತ್ರಿ ಯಾರಿಗೂ ತಿಳಿಯದಂತೆ ಅದೃಶ್ಯಳಾದಳು.



ಅದಕ್ಕಾಗಿ ರಾಜನೇನೂ ಹೆಚ್ಚು ಚಿಂತಿಸಲಿಲ್ಲ. ಸವತಿ ಫಕ್ಕನೆ ಅದೃಶ್ಯಳಾಗುತ್ತಲೇ ಮಂದಾಕಿನಿಗೆ ಒಂದು ಬದಿಯಿಂದ ಸಂತೋಷವೂ ಇನ್ನೊಂದು ಬದಿಯಿಂದ ವಿಚಾರವೂ ಉಂಟಾಯಿತು. ಇನ್ನು ಇಷ್ಟ ಬಂದಂತೆ ಮಹೀಪಾಲನನ್ನು ಬಾಧಿಸಬಹುದೆಂಬ ತೃಪ್ತಿ. ಆದರೆ ಆ ಮಾಯಾವಿನಿ ಯಾವ ಉದ್ದೇಶದಿಂದ ಎಲ್ಲಿಗೆ ಹೋಗಿದ್ದಾಳೋ? ಎಂದು, ಮಂದಾಕಿನಿಗೆ ಅನುಮಾನವೂ ಭಯವೂ ಒಳಗೊಳಗೇ ಇತ್ತು. ಏನಾದರೂ ತನ್ನ ಮುದ್ದು ಕುವರನಾದ ಭಾನುತೇಜನಿಗೇ ಪಟ್ಟಕಟ್ಟಿಸಿಬಿಡಬೇಕೆಂಬ ಹಟವು ಅವಳ ಮನಸ್ಸಿನೊಳಗೇ ಅಭಿವೃದ್ಧಿ ಹೊಂದುತ್ತಿತ್ತು. ದಿನ ಹೋದಂತೆ ಸವತಿಯ ಮಗನ ಮೇಲೆ ಅವಳ ಹಗೆ ಹೆಚ್ಚಾಗುತ್ತಾ ಬಂದಿತು.

ತನ್ನ ಮಗನ ಮೇಲಿನ ಮಮತೆ ಅವಳಿಗೆ ಎಷ್ಟು ಹೆಚ್ಚಾಯಿತೆಂದರೆ, 'ಮಹೀಪಾಲನನ್ನು ಹತಗೊಳಿಸಿದರೇನೇ, ತನ್ನ ಮಗನಿಗೆ ಸಿಂಹಾಸನ ದೊರೆಯುವುದಷ್ಟೇ' ಎಂಬ ನಿಶ್ಚಯಕ್ಕೆ ಬಂದಳು. ಎಂತಹ ಕ್ರೂರ ಕಾರ್ಯವನ್ನಾದರೂ ಮಾಡಿಬಿಡುವಷ್ಟು ಧೈರ್ಯವು ಅವಳಿಗೆ ಬಂತು. ಹೃದಯದಲ್ಲಿ ವಿಷಬೀಜವು ಬಿದ್ದಮೇಲೆ ಕೇಳುವುದೇನು? ಅದು ಮೊಳಕೆಯೊಡೆದು ಗಿಡವಾಗಿ ಬೆಳೆಯುತ್ತಲೇ ಇತ್ತು. ರಾತ್ರಿಯೂ, ಹಗಲೂ ನಿದ್ರಾಹಾರ ಕೂಡಾ ಬಿಟ್ಟು, ಮಂದಾಕಿನಿ ಈ ವಿಷಯವನ್ನು ಕುರಿತೇ ತೀವ್ರವಾಗಿ ಯೋಚನೆ ಮಾಡುತ್ತಿದ್ದಳು. ಅವಳ ಯೋಚನೆ ಫಲಿಸುವ ಕಾಲವೂ ಬೇಗನೇ ಬಂದಿತು.

ಇದ್ದಕ್ಕಿದ್ದಂತೆ ಛಲ್ಲಾಣ ರಾಜ್ಯದೊಳಗೆಲ್ಲಾ ಒಂದು ವಿಚಿತ್ರವಾರ್ತೆ ಹಬ್ಬ ತೊಡಗಿತು.— "ಗಂಧರ್ವರು ದೇವಗಣಕ್ಕೆ ಸೇರಿದವರು. ಅವರ ಕನ್ಯೆಯನ್ನು ಮಾನವನು ಮದುವೆಯಾಗುವುದೆಂದರೆ ತುಂಬಾ ವಿಪರೀತವೇ. ಶಾಸ್ತ್ರಕ್ಕೂ ವಿರುದ್ಧ. ಪ್ರಮೋದನು ಈ ಬಗೆಯ ಶಾಸ್ತ್ರ ವಿರುದ್ಧವಾದ ಕೆಲಸ ಮಾಡಿಬಿಟ್ಟಿದ್ದಾನೆ. ಗಂಧರ್ವ ಕನ್ಯೆಯನ್ನು ವರಿಸಿದ್ದಾನೆ. ಅದರ ಮೇಲೆ ಮಗನನ್ನೂ ಪಡೆದಿದ್ದಾನೆ! ಈ ಪರಿಸ್ಥಿತಿಯಲ್ಲಿ ದೇವತೆಗಳಿಗೆ ಕೋಪ ಬಾರದೇ ಇದ್ದೀತೆ? ಆದುದರಿಂದಲೇ ಈಗ್ಗೆ ಎರಡು ವರ್ಷಗಳಿಂದಲೂ ಈ ರಾಜ್ಯದಲ್ಲಿ ಮಳೆ ಬೀಳಲಿಲ್ಲ. ಬೆಳೆ ನಾಶವಾಯಿತು.



"ಇದಕ್ಕೆ ಪ್ರಮೋದನೇ ಕಾರಣ!" ಎಂದು ದೇಶದೊಳಗೆಲ್ಲಾ ಜನರು ಮಾತಾಡಿಕೊಳ್ಳುತ್ತಿದ್ದರು. ವಾರ್ತೆ ಒಂದೇ ಕಡೆ ನಿಲ್ಲುವುದೆ?

ಅದು ಕಿವಿಯಿಂದ ಕಿವಿಗೆ ಸಾಗಿ ರಾಜಾ ಪ್ರಮೋದನ ಕಿವಿಗೂ ಸೇರಿತು. ಅವನು ವ್ಯಸನದಿಂದ ಯೋಜನೆಗೆ ಬಿದ್ದನು.—"ಇದರಲ್ಲಿ ನನ್ನ ತಪ್ಪೇನಿದೆ? ಲೋಕದ ಕ್ಷೇಮವನ್ನು ಕೋರುವ ಒಬ್ಬ ಮಹರ್ಷಿ ಮಾಡಿದ ಕೆಲಸ. ಅವನು ಕೊಟ್ಟ ಹಣ್ಣಿನಿಂದಲ್ಲವೇ ನನಗೆ ಮದುವೆಯ ಇಚ್ಛೆ ಹುಟ್ಟಿದ್ದು? ಇಲ್ಲದಿದ್ದರೆ ನಾನು ಬ್ರಹ್ಮಚಾರಿಯಾಗಿಯೇ ಇರುತ್ತಿದ್ದೆನಲ್ಲಾ? ಆ ಮಹಾನುಭಾವನ ಆಶೀರ್ವಾದಕ್ಕೆ ವಿರೋಧವಾಗಿ ಈ ದುರ್ವಾರ್ತೆ ಏಕೆ ಹುಟ್ಟಬೇಕು? ಈ ಮದುವೆಯಿಂದಲೇ ಇಂತಹ ಅನಿಷ್ಟವುಂಟಾಗುವುದಾದರೆ, ಅದಕ್ಕೆ ಪೂರಾ ನಾನು ಹೊಣೆ ಹೇಗೆ?" ಎಂದು ತನ್ನೊಳಗೇ ತಾನು ತರ್ಕಿಸಿಕೊಳ್ಳುತ್ತಿದ್ದನು.

ತರ್ಕದಲ್ಲಿಯೇ ಅತ್ತಿತ್ತ ತೂಗಾಡುತ್ತಿದ್ದನಲ್ಲದೆ, ಒಂದು ನಿಶ್ಚಯಕ್ಕೆ ಬರಲು ಅವನಿಂದಾಗಲಿಲ್ಲ. 'ಇದು ಹೀಗೆಯೇ ಸರಿ' ಎಂದು ನಿಶ್ಚಯ ಮಾಡಿ ಹೇಳಬೇಕಾದರೆ ನಮ್ಮ ಕುಲಪುರೋಹಿತರೇ ಸರಿ, ಎಂದುಕೊಂಡು, ಪ್ರಮೋದನು ಪುರೋಹಿತರನ್ನು ಬರಮಾಡಿಕೊಂಡನು. ಊರಲ್ಲಿ ಹುಟ್ಟಿದ ಪ್ರವಾದವನ್ನೂ, ತನ್ನ ತರ್ಕವನ್ನೂ ಪುರೋಹಿತನ ಮುಂದೆ ಹೇಳಿ "ಇದಕ್ಕೇನು ನಿವೃತ್ತಿ?" ಎಂದು ಕೇಳಿದನು.

ಪುರೋಹಿತನು "ಪ್ರಭುವೇ! ವಿವಾಹವೇ ಬೇಡವೆಂದು ಹಟ ಹಿಡಿದವರೇ ನೀವು. ಆದುದರಿಂದ ಹಣ್ಣನ್ನು ಕೊಟ್ಟ ಆ ಋಷಿಯ ಮೇಲೆ ತಪ್ಪು ಹಾಕಲು ಬರುವುದಿಲ್ಲ. ಗಂಧರ್ವ ಕನ್ಯೆಯೊಡನೆ ವಿವಾಹವು ಮಾತ್ರ ಶಾಸ್ತ್ರವಿರುದ್ಧವೇ ಹೌದು" ಎಂದನು.

"ಹಾಗಾದರೆ ಇದಕ್ಕೆ ಏನೂ ನಿವಾರಣೆ ಇಲ್ಲವೇ?" ಎಂದು ರಾಜನು ತುಂಬಾ ವಿಚಾರದಿಂದ ಕೇಳಿದನು. ಒಂದು ಕಡೆ ಕಣ್ಣಿನ ಬೆಳಕಾದ ಮಹೀಪಾಲ ಕುಮಾರನೂ, ಇನ್ನೊಂದು ಕಡೆ ಆ ಕುಮಾರನನ್ನು ನೋಡಿ ಹೂಂಕರಿಸುತ್ತಿರುವ ಮಂದಾಕಿನಿಯೂ, ಪ್ರಮೋದನ ಕಣ್ಣಿಗೆ ಕಾಣುತ್ತಿದ್ದರು. ಈ ಇಬ್ಬರ ಮಧ್ಯದಲ್ಲಿ ರಾಜನೀಗ ಬಿದ್ದು ಚಡಪಡಿಸುತ್ತಿದ್ದಾನೆ. ಪುರೋಹಿತನೂ ಯೋಚಿಸುತ್ತಿದ್ದ.




ಆಗ ಅರಸನ ಪಕ್ಕದಲ್ಲಿಯೇ ಕುಳಿತಿದ್ದ ಮಂದಾಕಿನಿ, ತನ್ನ ಕುತ್ತಿಗೆಯ ಮೇಲೆ ಕೈ ಸನ್ನೆ ಮಾಡುವುದನ್ನು ಪುರೋಹಿತನು ನೋಡಿಬಿಟ್ಟ. ಅರಸನು ಕೇಳಿದ ಪ್ರಶ್ನೆಗೆ ಏನಾದರೂ ಉತ್ತರ ಹೇಳಲೇಬೇಕಷ್ಟೆ? ಮಂದಾಕಿನಿ ರಾಣಿಯ ಸೂಚನೆಯೂ ತಿಳಿದು ಹೋಯಿತು. ಅವಳ ಇಚ್ಛೆಗೆ ವಿರೋಧವಾಗಿ ನಡೆದರೆ ತನಗೆ ನೂರು ವರ್ಷ ತುಂಬಿದಂತೆಯೇ! ಈ ಸಂದಿಗ್ಧ ಸಮಯದಲ್ಲಿ ಒಳ್ಳೆಯದು ಕೆಟ್ಟದು ಎಂಬ ಯೋಚನೆಗೂ ಅವಕಾಶವಿಲ್ಲ. ಆದುದರಿಂದ ಕೂಡಲೇ ಪುರೋಹಿತನು ಹೀಗೆಂದನು:

"ಪ್ರಭು, ತಾವು ಹೇಳುವಂತೆ ಒತ್ತಾಯಿಸುವುದರಿಂದಲೇ ಹೇಳಬೇಕಾಗಿ ಬಂತು. ದೇಶಕ್ಕೆ ಬಂದಿರುವ ಈ ಅರಿಷ್ಟವು ತೊಲಗಿ ಹೋಗಬೇಕಾದರೆ, ದೇವ ಗಣಕ್ಕೆ ಸೇರಿದ ಗಂಧರ್ವ ಕಾಂತೆಗೆ ಹುಟ್ಟಿದ ಪುತ್ರನನ್ನು ದೇವ ಲೋಕಕ್ಕೇ ಕಳುಹಿಸಿ ಬಿಡಬೇಕು. ಇದು ಶಾಸ್ತ್ರವು ಹೇಳುವ ಮಾತು........"

ಇಷ್ಟು ಕೇಳುತ್ತಲೇ ಅರಸನು ಆತುರದಿಂದ—"ಏನೇನು? ಇನ್ನೊಮ್ಮೆ ಹೇಳಿ, ನನಗೆ ಅರ್ಥವಾಗಲಿಲ್ಲ" ಎಂದನು.

ಅದಕ್ಕೆ ಪುರೋಹಿತನು—"ಮಹಾಪ್ರಭು, ನಮ್ಮ ಮಹೀಪಾಲ ಕುಮಾರನನ್ನು ದೇವ ಲೋಕಕ್ಕೆ ಕಳುಹಿಸಿಬಿಟ್ಟರೆ, ರಾಜ್ಯವು ಸುಭಿಕ್ಷವಾಗುವುದೆಂದೂ, ಕುಮಾರನಿಗೆ ಒಳ್ಳೆಯ ಗತಿ ಪ್ರಾಪ್ತವಾಗಬೇಕಾದರೆ ಅವನನ್ನು ಯಥಾ ವಿಧಿಯಾಗಿ ಬಲಿ ಕೊಡಬೇಕೆಂದೂ ಪಂಡಿತರು ಹೇಳುವರು. ಪ್ರಜೆಗಳು ಕೂಡಾ ಇದೇ ವಿಷಯವನ್ನೆ ಮಾತಾಡಿಕೊಳ್ಳುತ್ತಾರೆ." ಎಂದನು.

ಇದನ್ನು ಕೇಳುತ್ತಾ ರಾಜನು ದುಃಖವನ್ನು ತಾಳಲಾರದೆ ಸಿಂಹಾಸನದ ಮೇಲೆಯೇ ಬಿದ್ದು ಹೋದನು. ಅವನಿಗೆ ಮೈಮೇಲೆ ಎಚ್ಚರಿಕೆ ಇಲ್ಲದೆ ಹೋಯಿತು. ಯಾವ ತಂದೆ ತಾನೇ ಇಂತಹ ಮಾತನ್ನು ಕೇಳಿ ತಾಳಿಕೊಂಡಾನು? ರಾಣಿ ಮಂದಾಕಿನಿಯೂ ತುಂಬಾ ದುಃಖದಲ್ಲಿ ಮುಳುಗಿ ಹೋದಳು! ಶೈತ್ಯೋಪಚಾರಗಳು ಮಾಡಿದ ನಂತರ ಪ್ರಮೋದನು ಎದ್ದನು.

ಮೊದಲೇ ದೇಶವು ದುರ್ಭಿಕ್ಷವಾದುದಕ್ಕಾಗಿ ಚಿಂತೆ, ಅದರ ಮೇಲೆ ಅಪವಾದ, ಇವುಗಳಿಂದ ಮೊದಲೇ ಕೊರಗುತ್ತಿದ್ದ ರಾಜನು,

ತನ್ನ ಮಗನನ್ನೇ ಬಲಿಕೊಡಬೇಕೆಂಬ ಪುರೋಹಿತನ ಮಾತನ್ನು ಕೇಳಿ ಸಿಡಿಲು ಬಡೆದಂತಾದನು. ಧೀರನಾದುದರಿಂದ ತನ್ನನ್ನು ತಾನೇ ಸಾವರಿಸಿಕೊಂಡು ಯೋಚಿಸ ತೊಡಗಿದನು. ಪಂಡಿತರೂ, ಪ್ರಜೆಗಳೂ, ಪುರೋಹಿತನೂ ಹೌದೆನ್ನುವುದನ್ನು ತಾನು ಅಲ್ಲವೆನ್ನುವುದು ಹೇಗೆ? ಪುತ್ರ ಪ್ರೇಮವೆಷ್ಟಿದ್ದರೂ ಪ್ರಜೆಗಳ ಮಾತಿಗೆ ಇದಿರಾಗಿ ಹೋಗುವುದು ಸಾಧ್ಯವೆ?

ಪ್ರಮೋದನು ನಿಸ್ಸಹಾಯಕನಂತೆ ಕಳೆಗೆಟ್ಟುಹೋದನು. ರಾಜ್ಯದಲ್ಲಿ ಪ್ರಜೆಗಳ ಹಾಹಾಕಾರವು ಕೇಳುತ್ತಲೇ ಇದೆ. 'ಮಹೀಪಾಲನನ್ನು ಬಲಿ ಕೊಡಬೇಕಾದ್ದೇ' ಎಂಬ ಶಬ್ದವು ರಾಜನ ಕಿವಿಯಲ್ಲಿ ಮೊಳಗುತ್ತಲೇ ಇತ್ತು. "ಆಗಲಿ! ಹಾಗೇ ಆಗಲಿ!" ಎಂದು ಪ್ರಮೋದನು ಸಮ್ಮತಿಸಿ ಬಿಟ್ಟನು.

ಮಹೀಪಾಲನನ್ನು ಬಲಿ ಕೊಡಲಿಕ್ಕಾಗಿ ಪುರೋಹಿತನು ಎಲ್ಲ ಏರ್ಪಾಡನ್ನೂ ಮಾಡ ತೊಡಗಿದನು. ಭದ್ರ ಕಾಳಿಯ ಆಲಯದಲ್ಲಿಯೇ ಬಲಿ. ಆಲಯದ ಎದುರಿನಲ್ಲಿ ಭಯಂಕರವಾದ ಬಲಿ ಪೀಠವು ಕಾಣುತ್ತಿತ್ತು. ಮುಹೂರ್ತವಿಟ್ಟ ದಿನವೂ ಬಂತು. ಹಿರಿಯರೆಲ್ಲಾ ಗುಂಪುಗೂಡಿದರು. ಸಾವಿರಾರು ಪ್ರಜೆಗಳು ನೋಡುತ್ತಿದ್ದರು. ಆದರೂ ಸಾಸಿವೆ ಬಿದ್ದರೆ ಕೇಳಿಸುವಷ್ಟು ನಿಶ್ಶಬ್ದ.

ಅತ್ತ ರಾಜ ಭವನದಲ್ಲಿ ಮಹೀಪಾಲನು ಓರಿಗೆಯ ಗೆಳೆಯರೊಡನೆ ಆಟಪಾಟಗಳಲ್ಲಿ ತಲ್ಲೀನನಾಗಿದ್ದನು. ಸೇವಕರು ಅವನನ್ನು




ಚೆನ್ನಾಗಿ ಅಲಂಕಾರ ಮಾಡಿದರು. ಬಳಿಕ ವಾದ್ಯಘೋಷಣದಿಂದ ಊರೊಳಗೆಲ್ಲಾ ಮೆರವಣಿಗೆ ಮಾಡಿಸುತ್ತ ಕಾಳೀ ಆಲಯಕ್ಕೆ ಕರೆತಂದರು. ಅಲ್ಲಿ ವೇದಿಕೆಯ ಮೇಲೆ ಅವನನ್ನು ಕೂಡಿಸಿ ಪುರೋಹಿತರು ಮಂತ್ರ ಘೋಷಣ ಮಾಡಿದರು. ಇದೆಲ್ಲಾ ಏಕೋ ಏನೋ ಎಂದುಕೊಂಡು, ಸರಳ ಸ್ವಭಾವದ ಆ ಹುಡುಗನು ಉತ್ಸಾಹದಿಂದಿದ್ದನು!

ಅಷ್ಟರಲ್ಲಿ ಪ್ರಮೋದನು ಹುಚ್ಚು ಹಿಡಿದವನಂತೆ ಅಲ್ಲಿಗೆ ಓಡಿಬಂದನು. ಬಂದು ಅಲ್ಲಿ ನೆರೆದಿದ್ದ ಗುರುಹಿರಿಯರ ಗುಂಪನ್ನು ನೋಡಿ, "ಅಯ್ಯಾ, ನನ್ನ ಮದುವೆ ಶಾಸ್ತ್ರ ವಿರುದ್ಧವೆಂದಿರಿ, ದೇವತೆಗಳಿಗೆ ದ್ರೋಹವೆಂದಿರಿ, ಇದರಿಂದಲೇ ಈಬಗೆಯ ದೇಶಾರಿಷ್ಟವುಂಟಾಯಿತೆಂದಿರಿ, ಇರಬಹುದು. ಇದಕ್ಕೆ ಪರಿಹಾರ

ವಾಗಿ ನನ್ನ ಮುದ್ದು ಮಗನನ್ನು ಬಲಿಕೊಡ ಲಿಕ್ಕೂ ಆತಂಕ ಪಡಿಸಲಾರೆ. ಆದರೆ ನನ್ನ ದೊಂದು ಸಣ್ಣ ಕೋರಿಕೆ. ಅಯ್ಯಾ ಸಭಾ ಸದರೆ, ಪೂಜ್ಯರೇ, ನನ್ನ ಮದುವೆಯ ಪರಿ ಣಾಮ ಹೀಗೆ ವಕ್ರವಾಗದಿದ್ದರೆ, ಈ ಮಹೀ ಪಾಲನು ಪಟ್ಟಕ್ಕೆ ಬರುವನಷ್ಟೆ? ಆದರೆ ವಿಧಿ ವಿಲಾಸ ಹೀಗಾಗಿ ಹೋಯಿತು. ನನ್ನ ಮುದ್ದು ಮಗು ಪಟ್ಟಾಭಿಷಿಕ್ತನಾದರೆ ಹೇಗಿರುವನೋ ಒಂದುಬಾರಿ ಕಣ್ಣಾರೆ ನೋಡಲು ಬಿಡಿರಿ. ಇದೇನನ್ನ ಕೋರಿಕೆ" ಎಂದು ಕಲ್ಲೂ ಕರಗು ವಂತೆ ಹೇಳಿಕೊಂಡನು. ಇದನ್ನು ಕೇಳಿ ಜನ ರೆಲ್ಲಾ ಕಣ್ಣೀರು ತುಂಬಿಕೊಂಡರು.

ಈ ಮಾತು ಮಂದಾಕಿನಿಗೆ ಹಿಡಿಸಲಿಲ್ಲ. ಏನೋ ಗುಸಗುಸನೆಂದಳು. ಸನ್ನೆಮಾಡಿದಳು. ಯಾರೂ ಅದನ್ನು ಲಕ್ಷಿಸಲಿಲ್ಲ. ಹಿರಿಯ ಪುರೋಹಿತನು ಎದ್ದು ನಿಂತು—"ಧರ್ಮ ಪ್ರಭುಗಳಾದ ನಮ್ಮ ಮಹಾ ರಾಜರು ಜನ ವಾಕ್ಯಕ್ಕೆ ಒಪ್ಪಿಕೊಂಡೇ ಇದ್ದಾರೆ. ಇನ್ನೊಂದು ಕ್ಷಣವೋ ನಿಮಿಷವೋ ಎನ್ನುವುದರೊಳಗೆ ಕುಮಾರನ ಬಲಿ ಆಗಿಯೇ ಆಗುತ್ತದೆ. ನಮ್ಮ ರಾಜನೇ ಬಂದು ಹೀಗೆ ಕೋರಿಕೊಳ್ಳುವಾಗ ಆಗದೆನ್ನುವುದು ಮೂರ್ಖತೆಯಾದೀತು. ಬಾಲನ ತಲೆಯ ಮೇಲೆ ಒಮ್ಮೆ ಕಿರೀಟವ ನ್ನಿಟ್ಟು ಅರಸನ ಕೋರಿಕೆಯನ್ನು ಈಡೇರಿ ಸೋಣ" ಎಂದನು. ಈ ಮಾತು ಎಲ್ಲರಿಗೂ ಒಪ್ಪಿಗೆಯಾಯಿತು.

"ಇಡಿರಿ! ಕುಮಾರ ರಾಜನಿಗೆ ಕಿರೀಟ ವಿಡಿರಿ. ನಾವೆಲ್ಲಾ ಕಣ್ಣಿನ ಹಬ್ಬವಾಗಿ ನೋಡೋಣ" ಎಂದು ಆವೇಶದಿಂದ ಸಾವಿ ರಾರು ಜನರು ಕೂಗಿದರು.

ತಕ್ಷಣವೇ ಆಸ್ಥಾನದಿಂದ ಜಗಜಗಿಸುವ ರತ್ನ ಕಿರೀಟವನ್ನು ತರಿಸಿದರು. ಯಥೋಚಿತ ವಾಗಿ ಬಾಲ ಮಹೀಪಾಲನ ಶಿರಸ್ಸಿನಲ್ಲಿ ಅದ ನ್ನಿಟ್ಟರು. ಹೂಮಾಲೆ ಹಾಕಿದರು. ಕೋಲಾ ಹಲದೊಂದಿಗೆ ಆ ಬಾಲಕನನ್ನು ಗುಡಿಗೆ ಮೂರು ಪ್ರದಕ್ಷಿಣೆ ಮಾಡಿಸಿ, ಬಲಿಪೀಠದ ಮುಂದೆ ನಿಲ್ಲಿಸಿದರು.

ಮಂತ್ರಘೋಷದ ಮಧ್ಯೆ ಪುರೋಹಿತನು, "ಜೈ ಭವಾನಿ!" ಎನ್ನುತ್ತಾ ಕತ್ತಿ ಎತ್ತಿದನು. ಪ್ರಜೆಗಳ ನೋಟವೆಲ್ಲಾ ಆ ಬಾಲಕನ ಮೇಲೆಯೇ ನೆಟ್ಟುಹೋಗಿತ್ತು.

ಆ ಕ್ಷಣದಲ್ಲಿ— [ಇನ್ನೂ ಇದೆ.[






## 2

ಆ ಕ್ಷಣದಲ್ಲಿ "ತಾಳಿ! ತಾಳಿ!" ಎಂಬ ಕೂಗೊಂದು ಕೇಳಿಸಿತು. ಎಲ್ಲರೂ ಆ ಕಡೆಗೆ ತಿರುಗಿನೋಡಿದರು. ಕಿರಾತರಾಜನು "ತಾಳಿ! ಮಹೀಪಾಲನ ತಲೆಯಿಂದ ರತ್ನಕಿರೀಟವನ್ನು ತೆಗೆಯಬೇಕು!" ಎಂದು ಕೂಗಿ ಹೇಳಿದನು. ಎಲ್ಲರೂ ಒಮ್ಮೆ ನಿಸ್ತಬ್ಧರಾದರು. ದುಃಖಭಾರದಿಂದ ಪ್ರಮೋದನೂ ತಲೆತಗ್ಗಿಸಿ ನಿಂತನು.

ಒಡನೇ ಪುರೋಹಿತನು ಎತ್ತಿದ ಕತ್ತಿಯನ್ನು ಕೆಳಗಿಟ್ಟು, ರಾಜಕುಮಾರನ ಕಿರೀಟಕ್ಕೆ ಕೈಚಾಚಿದನು.

ಅಷ್ಟರಲ್ಲಿಯೇ ಎಲ್ಲರ ಗುಂಡಿಗೆಯೂ ದಡ್ಡರಿಸಿ ಹೋಗುವಂತೆ— "ಹಾ! ಕುಮಾರಾ, ಅನ್ಯಾಯವಾಗಿ ನಿನ್ನನ್ನೆ ಬಲಿ ಕೊಡುತ್ತಾರೆಯೋ?" ಎಂದೊಂದು ಬಲವಾದ ಕೋಪಾರ್ತನಾದವು ನಾಲ್ಕು ಸುತ್ತಲೂ ಮಾರ್ಮೊಳಗಿತು!

ಎಲ್ಲಿಂದ ಈ ಶಬ್ದವು ಬಂತೆಂದು ಜನರು ಅತ್ತಿತ್ತ ನೋಡಿದರು. ಆಕಾಶದಲ್ಲೊಂದು ಸುವರ್ಣ ಹಂಸವು ಕೆಳಗಿಳಿದು ಬರುತ್ತಿತ್ತು! "ಹಂಸ! ಹಂಸ!" ಎಂದು ಜನರು ಕೇಕೇ ಹಾಕಿದರು. ಅಷ್ಟರಲ್ಲಿ ಆ ಹಂಸವು ತೀರಾ ಕೆಳಗೆ ಬಂದುಬಿಟ್ಟಿತ್ತು.

ಅದು ಮಹೀಪಾಲನ ಬಳಿಗೇ ಬಂದು "ಬಾರೋ ನನ್ನ ಕಂದಾ!" ಎಂದಿತು. "ಅಮ್ಮಾ! ಅಮ್ಮಾ!" ಎನ್ನುತ್ತಾ ಮಹೀಪಾಲನು ಆ ಹಂಸದ ಕೊರಳನ್ನು ಸುತ್ತಿಕೊಂಡನು. ತತ್‌ಕ್ಷಣವೇ ರತ್ನಕಿರೀಟಧಾರಿಯಾದ ಮಹೀಪಾಲನನ್ನು ಬೆನ್ನಿನಮೇಲೇರಿಸಿಕೊಂಡು, ಆ ಹಂಸವು ಆಕಾಶಲೋಕಕ್ಕೆ ಹಾರಿಹೋಯಿತು! ಇದೆಲ್ಲಾ ಒಂದೇ ನಿಮಿಷದೊಳಗೆ ನಡೆದುಹೋಯಿತು. ಎಲ್ಲರೂ ಸ್ತಂಭೀಭೂತರಾಗಿದ್ದರು.



ಎಚ್ಚರಕ್ಕೆ ಬಂದಾಗ ಆ ಹಂಸವು ದೂರ ಹೋಗಿತ್ತು. ಆ ಹಂಸದ್ವನಿ ಪ್ರಮೋದನ ಮೊದಲನೇ ರಾಣಿಯಾದ ಗಂಧರ್ವಿಣಿಯ ದೆಂದು ಈಗ ತಿಳಿಯಿತು. ತಾಯಿಯೇ ತನ್ನ ಕುಮಾರನನ್ನು ಎತ್ತಿಕೊಂಡು ಹೋಗಿಬಿಟ್ಟ ಳೆಂದು ಎಲ್ಲರೂ ಅರಿತರು.

ಹಾರುತ್ತಿರುವ ಹಂಸವನ್ನು ನೋಡಿ ಪುರೋಹಿತನಾದ ರಾಜಗುರು ಆವೇಶದಿಂದ– "ಹಿಡಿಯಿರಿ! ಹೊಡೆಯಿರಿ!! ಮಾಯದ ಪಕ್ಷಿ!!!" ಎಂದು ಕೂಗಿ ಅವಸರಪಡಿಸಿದನು. ಎಲ್ಲರೂ ಅತ್ತಿತ್ತ ಕುಣಿದಾಡಿದರೇ ಹೊರತು, ಆ ಪಕ್ಷಿಯನ್ನೇನು ಮಾಡಲಿಕ್ಕೂ ಯಾರಿಗೂ ಸಾಧ್ಯವಾಗಲಿಲ್ಲ.

"ಅನ್ಯಾಯವಾಗಿ ನಿನ್ನನ್ನೇ ಬಲಿ ಕೊಡು ತ್ತಾರೆಯೇ!" ಎಂಬ ಆ ಹಂಸದ ವಾಕ್ಯ ಎಲ್ಲರ ಕಿವಿಯಲ್ಲಿಯೂ ತಿರುಗುತ್ತಿತ್ತು. ಪುರೋಹಿತನ ಆವೇಶವನ್ನು ನೋಡಿ ಅನೇಕ ರಿಗೆ ಸಂಶಯವೂ ಉಂಟಾಯಿತು. ಎರಡು ವರ್ಷ ದೇಷಾರಿಷ್ಟವು ತಲೆಹಾಕಿದ್ದಕ್ಕೂ, ರಾಜ ಕುಮಾರನನ್ನು ಬಲಿಕೊಡಬೇಕೆಂದು ದೇಶ ದಲ್ಲಿ ಪುಕಾರು ಹುಟ್ಟಿದ್ದಕ್ಕೂ, ಈ ಘಟನೆಗೂ ಏನೋ ಸಂಬಂಧವಿರುವಂತೆ ತೋರಿತು. ಅನೇ ಕರು ಗುಜುಗುಜು ಮಾತಾಡಿಕೊಂಡರು. ಅನೇಕರು ರಾಜಕುಮಾರನು ಸುರಕ್ಷಿತವಾಗಿ ತಾಯಿಯ ಮಡಿಲನ್ನು ಸೇರಿದನೆಂದು ಸಂತೋಷ ಪಟ್ಟರು. ಹೀಗೆ ಬಗೆ ಬಗೆಯ ಜನರು ಬಗೆಬಗೆಯಾಗಿ ಮಾತಾಡಿಕೊಂಡರು.

ಪ್ರಮೋದ ರಾಜನೂ, ಕುಮಾರನ ಗಂಡವು ಕಳೆದುದನ್ನು ಕಣ್ಣಾರೆ ನೋಡಿ ಭಾರವಿಳಿದವ ನಂತಿದ್ದ. ಅವನ ಕಣ್ಣು ಚೆನ್ನಾಗಿ ತೆರೆದು ಕೊಂಡಿತು. ಯೋಚನೆ ಮಿಂಚಿನಂತೆ ಓಡಿತು. ತನ್ನಮೂಢತನಕ್ಕೆ ತನ್ನೊಳಗೆ ತಾನೇ ಹಳಿದು ಕೊಂಡು, ಯೋಚಿಸುತ್ತಾ ಒಂದು ಸ್ತಿಮಿತಕ್ಕೆ ಬರುತ್ತಿದ್ದನು.

"ಮಾಯ ಪಕ್ಷಿ!" ಎಂದು ಕೂಗುತ್ತ, ಆವೇಶದಿಂದಿರುವ ಪುರೋಹಿತನನ್ನು ಬಂಧಿಸು ವಂತೆ, ಪ್ರಮೋದನು ಭಟರಿಗೆ ಆಜ್ಞಾಪಿಸಿ ದನು. ಅದನ್ನು ಕೇಳುತ್ತಲೇ ಕಿರೀರಾಣಿ ಮಂದಾಕಿನಿ ಬೆದರಿಬಿದ್ದಳು. ಅವಳ ತಲೆ ಮಿಂಚಿನ ವೇಗದಲ್ಲಿ ತಿರುಗಿತು. ಸಪ್ಪಳ ಮಾಡದೆ ಅವಳು ಅಲ್ಲಿಂದ ಸರಸರನೆ ತನ್ನ ಅಂತಃಪುರವನ್ನು ಹೋಗಿ ಸೇರಿದಳು.



ತನ್ನ ಮಗಳ ಚರ್ಯೆಯನ್ನೇ ಕಣ್ಣಿಟ್ಟು ನೋಡುತ್ತಿದ್ದ ಕಿರಾತರಾಜನು, ಏನೋ ಅಪಾಯವನ್ನು ಗ್ರಹಿಸಿಕೊಂಡು ಅವಳ ಹಿಂದೆ ಅವನೂ ಹೋದನು. ಅವನು ಹೋಗಿ ನೋಡಿದಾಗ, ಮಂದಾಕಿನಿ ಶಯ್ಯಾಮಂದಿರದಲ್ಲಿ ಬಿದ್ದುಕೊಂಡಿದ್ದಳು.

"ಅಪ್ಪಾ, ಕ್ಷಮಿಸಿ, ಇಷ್ಟರವರೆಗೆ ನಾನು ಒಳ್ಳೆಯವಳೆನಿಸಿಕೊಂಡಿದ್ದೆ. ಈಗ ರಾಜಗುರು ಸಿಕ್ಕಿಬಿದ್ದ. ನಾಳಿನ ವಿಚಾರಣೆಯಲ್ಲಿ ಅವನು ಸತ್ಯವನ್ನು ಹೇಳುತ್ತಾನೆ. ಆಗ ನಾನು ಕೆಟ್ಟವಳಾಗುತ್ತೇನೆ. ಆದಕ್ಕಾಗಿ ನಾನು ಈಗಲೇ ಹೊರಟುಬಿಟ್ಟೆ. ಅಪ್ಪಾ! ನನ್ನ ಕಂದ! ಭಾನುತೇಜ! ನೀನೇ ನೋಡಿಕೋ! ಅಣ್ಣನನ್ನು ಕೂಡಾ ಇಲ್ಲಯೇ ಇರುವಂತೆ ಹೇಳು. ನನ್ನ ಮರ್ಯಾದೆ ನಿನ್ನ ಕೈಗೇ...." ಎನ್ನುತ್ತಾ ಪ್ರಾಣವನ್ನು ಬಿಟ್ಟಳು. ಅವಳ ಮರಣವನ್ನು ನೋಡುತ್ತಾ ಕಿರಾತರಾಜನು ಕೈ ಕೈ ಹಿಸುಕಿಕೊಂಡನು.

ಕಿರಾತರಾಜನು ದುಃಖಿಸುತ್ತಾ—"ರಾಜಕುಮಾರ ಮಹೀಪಾಲನ ಕಷ್ಟವನ್ನು ಕಾಣಲಾರದೆ, ಮಂದಾಕಿನಿ ಎದೆಯೊಡೆದು ಸತ್ತಳು!" ಎಂದು ವಿಲಪಿಸಿದನು.

ಪ್ರಮೋದನೂ ಅಲ್ಲಿಗೆ ಬಂದು—"ಹಾ! ನಾನೆಂತಹ ದುರದೃಷ್ಟವಂತ! ಹಿರಿಯರಾಣಿಯನ್ನು ಕೈಯಾರೆ ಹೋಗಲಾಡಿಸಿಕೊಂಡೆ. ಮಗನಿಗೆ ಬಂದ ಗಂಡವು ತಪ್ಪಿ, ಅವನು ತಾಯಿಯ ಮಡಿಲಲ್ಲಿ ಸೇರಿದನೆಂದು ಸಂತೋಷ ಪಡುವಾಗ, ನನ್ನ ಪ್ರಿಯಳಾದ ಮಂದಾಕಿನಿಯೂ ಸತ್ತುಹೋದಳಲ್ಲಾ! ಇನ್ನಾರು ನನಗೆ ದಿಕ್ಕು?...." ಎಂದು ಬಗೆಬಗೆಯಾಗಿ ದುಃಖಿಸಲಾರಂಭಿಸಿದನು.

ಈ ವಾರ್ತೆಯು ನಗರದೊಳಗೆಲ್ಲಾ ಹರಡಿಕೊಂಡು ಹೋಯಿತು. ಮಂದಾಕಿನಿ ತುಂಬಾ ಕೋಮಲಹೃದಯೆ ಎಂದು ಹೇಳಿಕೊಳ್ಳುತ್ತಾ ಪ್ರಜೆಗಳು ತುಂಬಾ ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ಎಲ್ಲರ ಬಾಯಲ್ಲಿಯೂ ಈ ಆಶ್ಚರ್ಯದ ಮಾತೇ ಮಾತು!

ಯಥಾ ಕಾಲದಲ್ಲಿ ರಾಜಗುರುವಿನ ವಿಚಾರಣೆ ಜರುಗಿತು. ಅವನು ಇದ್ದದಿದ್ದಂತೆ ಎಲ್ಲವನ್ನೂ ಹೇಳಿದನು. ಎಲ್ಲವೂ ಚಿಕ್ಕರಾಣಿಯ ಇಷ್ಟದಂತೆ ತಾನು ನಡೆಸಿದ ತಂತ್ರವೆಂದೂ, ಮಗಳಿಗೆ ಸಹಾಯ ಮಾಡಲಿಕ್ಕಾಗಿಯೇ




ಕಿರಾತರಾಜನು ಇಲ್ಲಿಗೆ ಬಂದು ಸೇರಿರುವನೆಂದೂ ರಾಜಗುರು ಸತ್ಯವನ್ನೇ ಹೇಳಿದರೂ ಪ್ರಮೋದನು ನಂಬಲಿಲ್ಲ. ಪ್ರಜೆಗಳೂ ನಂಬಲಿಲ್ಲ. ಎದೆಯೊಡೆದು ಸತ್ತುಹೋದ ರಾಣಿಯ ಮೇಲೆ ತಪ್ಪನ್ನು ವಾಲಿಸಿ ತಾನು ತಪ್ಪಿಸಿಕೊಳ್ಳಲು ನೋಡುತ್ತಿದ್ದಾನೆಂದು ಎಲ್ಲರೂ ಭಾವಿಸಿದರು.

ಪ್ರಮೋದನು ಉಗ್ರನಾಗಿ—"ಓ ದುಷ್ಟ ಪುರೋಹಿತನೇ! ಮಂದಾಕಿನಿಯು ಎಷ್ಟು ಕೋಮಲೆ! ಎಂಥ ದಯಾಮಯಿ! ರಾಜಕುಮಾರನ ಮೇಲೆ ನೀನು ಮಾಡಿದ ಭಯಂಕರವನ್ನು ನೋಡಿ ಅವಳು ಎದೆಯೊಡೆದು ಸತ್ತದ್ದೇ ಅವಳ ಸದ್ಗುಣಕ್ಕೆ ಸಾಕ್ಷಿ! ನೀನು ನೀಚ! ನೀನು ದೇಶದಲ್ಲಿ ಇಲ್ಲದ ಪುಕಾರನ್ನು ಹುಟ್ಟಿಸಿ ನನ್ನನ್ನೇ ನಂಬಿಸಿ ರಾಜಕುಮಾರನ ಬಲಿಗೆ ಯತ್ನಿಸಿದಿ; ನಾಳೆ ಭಾನುತೇಜನನ್ನೂ, ಆ ಮೇಲೆ ನನ್ನನ್ನೂ ಹೀಗೇ ಮಟ್ಟಮಾಡಿ, ನಮ್ಮ ರಾಜ್ಯವನ್ನೆ ನುಂಗಿಕೊಳ್ಳುವ ಗತ್ತು ನಿನ್ನದು! ನಿನ್ನನ್ನು ಏನು ಮಾಡಿದರೂ ಪಾಪವಿಲ್ಲ, ಹೋಗು. ನಮ್ಮ ರಾಜ್ಯವನ್ನೆ ಬಿಟ್ಟು ಹೊರಟು ಹೋಗು!" ಎಂದು ಹೇಳಿ ಅವನನ್ನು ಗಡೀಪಾರು ಮಾಡಿಸಿಬಿಟ್ಟನು.

ಹೀಗೆ ರಾಜನಿಂದ ಪರಾಭವಗೊಂಡು, ಶಕ್ತಿಹೀನನಾಗಿಹೋದ ಆ ರಾಜಗುರು ಹಿಂದಿರುಗಿ ನೋಡದೆಯೇ ಹೋಗುತ್ತಿದ್ದ. ಅವನಿಗೊಂದು ದೊಡ್ಡ ವೈರಾಗ್ಯಭಾವ ವುಂಟಾಯಿತು. ಹೆಂಡತಿ, ಮಕ್ಕಳು, ಧನ-ಧಾನ್ಯಮೊದಲಾದ ಯಾವುದೊಂದಾಶೆಯೂ ಅವನಿಗೀಗ ಇಲ್ಲ. "ಇನ್ನುಮೇಲೆ ಭಲ್ಲಾಣ ರಾಜ್ಯಕ್ಕೇ ಕಾಲಿಡಲಾರೆ" ಎಂದು ತನ್ನೊಳಗೆ ತಾನೇ ಪತಿಜ್ಞೆಮಾಡಿಕೊಂಡನು. ಕಾಲು ಒಯ್ದತ್ತ ನಡೆಯುತ್ತಿದ್ದನು.

ಹೋಗಿ ಹೋಗಿ ಒಂದು ಅಡವಿಯನ್ನು ಸೇರಿದನು. ಬಳಲಿಹೋಗಿ ಒಂದು ಮರದ ಕೆಳಗೆ ಕುಳಿತನು. ಅದರ ಬೊಡ್ಡೆಗೆ ಒರಗಿಕೊಂಡು ವಿಶ್ರಮಿಸುತ್ತಿರುವಾಗ, ಕುದುರೆ ಗೊರಸುಗಳ ಖಟಖಟಸದ್ದು ಕೇಳಿಬರತೊಡಗಿತು.

ನೋಡ ನೋಡುತ್ತಿದ್ದಂತೆ ಅಲ್ಲಿಗೆ ಒಬ್ಬ ಯುವಕನು ಬಂದಿಳಿದ. ರಾಜಗುರುವಿನ ಗುರುತು ಅವನಿಗೆ ಸಿಕ್ಕಿತು. ಅವನು ಕಿರಾತ ರಾಜನ ಮಗನಾದ ಮಂದಪಾಲ. ಅದು ಕಿರಾತರಾಜ್ಯಕ್ಕೆ ಸೇರಿದ ಅಡವಿಯಾಗಿತ್ತು.

ಮಂದಪಾಲನು ರಾಜಗುರುವನ್ನು ಸಾದರದಿಂದ ತನ್ನ ದಿವ್ಯಕುಟೀರದ ಕಡೆಗೆ ಕರೆದೊಯ್ದನು. ಅಲ್ಲಿ ಅವನಿಗೆ ಉಪಚಾರಗಳೂ ಜರುಗಿದುವು. ರಾಜಗುರು ಎಷ್ಟೋ ದೈನ್ಯಭಾವದಿಂದ ತನ್ನ ಎಲ್ಲಾ ಸ್ಥಿತಿಗಳನ್ನೂ ಮನಸ್ಸುಬಿಟ್ಟು ಮಂದಪಾಲನೊಡನೆ ಹೇಳಿಕೊಂಡನು.

ಮಂದಪಾಲನು ಅವನನ್ನು ಸಮಾಧಾನಪಡಿಸುತ್ತ—"ಗುರೂಜಿ! ಪ್ರಪಂಚವನ್ನೆ ನಡೆಸುವಷ್ಟು ಪ್ರಜ್ಞಾಶಾಲಿಗಳು ನೀವು. ಇಷ್ಟೊಂದಕ್ಕೆಲ್ಲಾ ಹೀಗೆ ವೈರಾಗ್ಯಭಾವವನ್ನು ತಾಳಬಾರದು. ಧೈರ್ಯವಹಿಸಿರಿ. ನಿಮ್ಮ ಆಶೀರ್ವಾದವೊಂದೇ ನನಗಿದ್ದರೆ ಸಾಕು. ಇಗೋ ಕತ್ತಿ ಹಿಡಿದುಕೊಂಡು ಹೇಳುತ್ತಿದ್ದೇನೆ. ಯಾವದಿನ ಭಲ್ಲಾಣರಾಜ್ಯದ ಸಿಂಹಾಸನದಲ್ಲಿ ಈ ಮಂದಪಾಲನು ಅಧಿಕೃತನಾಗುತ್ತಾನೋ, ಆ ಕ್ಷಣದಿಂದ ನಿಮಗೆ ಸಮಸ್ತ ಸೌಖ್ಯವೂ ಬರುವುದೆಂದು ನಂಬಿರಿ. ಇದನ್ನು ಸಾಧಿಸುವುದೇ ಇನ್ನು ನನ್ನಗುರಿ!" ಎಂದು ಶಪಥಪೂರ್ವಕವಾಗಿ ಹೇಳಿದನು. ಈ ಶಪಥವನ್ನು ಕೇಳಿ ರಾಜಗುರುವಿಗೆ ಆಶ್ಚರ್ಯವೂ ಆನಂದವೂ, ವಿಚಾರವೂ ಉಂಟಾಯಿತು.

ಈ ಶಪಥದಲ್ಲಿ ರಾಜ ಗುರುವಿನ ಸೇಡೂ ಅಡಗಿರುವುದರಿಂದ ಅವನಿಗೂ ತುಂಬಾ ಸಂತೋಷ. ಆದರೂ ಸಂದೇಹ ಉಂಟಾಗದಿರಲಿಲ್ಲ. "ನಾನು ಇದೇ ಮೊದಲು ಮಂದಾಕಿನಿಯ ಸೂಚನೆಯಂತೆನಡೆದು ಕೆಟ್ಟುಹೋದೆ.



ಅವಳು ಮಾತ್ರ ಒಳ್ಳೆಯವಳಾಗಿಯೇ ಸತ್ತಿದ್ದಾಳೆ. ಆ ಕಿರಾತರಾಜ ನನ್ನನ್ನು ಕಾಪಾಡಲು ನೋಡಲೇ ಇಲ್ಲ. ಅವನಿಗೆ ಮಗಳ ಮೇಲೆಯೂ, ಮೊಮ್ಮಗನ ಮೇಲೆಯೂ, ಪೂರ್ಣ ಮಮಕಾರ. ಈಗ ನೋಡಿದರೆ ಈ ಮಂದಪಾಲನಿಗೆ ರಾಜ್ಯಾಕಾಂಕ್ಷೆ ಹಿಡಿದಿದೆ. ಗೆದ್ದ ಮೇಲೆ ಏನು ಮಾಡುವನೋ? ಈ ಕಿರಾತರನ್ನು ನಂಬುವುದು ಹೇಗೆ? ಆದರೂ ನನಗೀಗ ಇವನೊಂದಿಗಿರುವುದೇ ಮೇಲಾಗಿದೆ. ಮುಂದೆ ನಾನು ಅಧಿಕಾರಕ್ಕೆ ಬಂದಾಗ. ಈಗ ನನಗೆ ಬಂದ ಕೆಟ್ಟಹೆಸರನ್ನಾದರೂ ನನ್ನ ಚಾಕಚಕ್ಯತೆಯಿಂದ ಅಳಿಸಿ ಹಾಕಿಕೊಳ್ಳಬಹುದು. ಮತ್ತು ಪ್ರಮೋದನಮೇಲೂ, ಕಿರಾತರಾಜನ ಮೇಲೂ ಇಷ್ಟ ಬಂದಂತೆ ಹಗೆ ತೀರಿಸಿಕೊಳ್ಳಬಹುದು...." ಎಂದು ಮುಂತಾಗಿ ಯೋಚಿಸಿ,



ಅನಂತರ ಕೊಂಚ ಕಾಲದಲ್ಲಿಯೇ ಭಾನು ತೇಜನಿಗೆ ಒಬ್ಬ ಮಗನು ಹುಟ್ಟಿದನು. ಇದರಿಂದ ಪ್ರಜೆಗಳಿಗೆಲ್ಲಾ ಬಹಳ ಆನಂದವಾಯಿತು. ಪ್ರಮೋದನೂ ಬಹಳ ಧನ್ಯತೆಯನು ಅನುಭವಿಸಿದನು. ಆ ಶಿಶುವಿಗೆ 'ಚಿತ್ರಭಾನು' ಎಂದು ನಾಮಕರಣ ಮಾಡಿ ಬಹಳ ಮುದ್ದಿನಿಂದ ಬೆಳೆಸುತ್ತಿದ್ದರು.

ಹೀಗೆ ಕಷ್ಟಗಳು ಕಳೆದು ಒಳ್ಳೆಯ ದಿನಗಳು ಬಂದುವಲ್ಲಾ ಎಂದು ರಾಜನೂ ಪ್ರಜೆಗಳೂ ಸಂತೋಷದಲ್ಲಿ ನೆಮ್ಮದಿಯಾಗಿದ್ದಾಗ, ರಾಜಾಸ್ಥಾನವನ್ನು ಮತ್ತೆ ಕಲವರ ಪಡಿಸುವಂತಹ ಸಂಗತಿಯೊಂದು ಬಂದಿತು:

ಒಂದು ದಿನ ಪ್ರಮೋದನ ಆಸ್ಥಾನಕ್ಕೆ ಒಬ್ಬ 'ರಾಯಭಾರಿ' ಬಂದನು. ಅವನು ಬಲ್ಲಾಣದ ಸಾಮಂತರಾಜನಾದ ಘೂರ್ಜರ ದೇಶದಿಂದ ಬಂದಿದ್ದನು. ಬಂದು ಪ್ರಮೋದನಿಗೆ ಒಂದು ಪತ್ರವನ್ನು ಸಮರ್ಪಿಸಿದನು. ಆ ಪತ್ರದಲ್ಲಿ ಹೀಗಿತ್ತು:—

"....ಭಲ್ಲಾಣ ರಾಜ್ಯದಲ್ಲಿ ಆನುವಂಶಿಕವಾಗಿ ರತ್ನಕಿರೀಟಧಾರಣವು ಪದ್ಧತಿಯಾಗಿ ನಡೆದ ಆಚಾರವಾಗಿತ್ತು. ನಾವೆಲ್ಲಾ ಅಂದರೆ ಸಾಮಂತ ರಾಜರೆಲ್ಲಾ ತಲೆತಲಾಂತರವಾಗಿ ಆ ರತ್ನಕಿರೀಟಧಾರಿಯಾದ ಪ್ರಭುವಿಗೇ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಿದ್ದೆವು. ಈಗ ಆ ರತ್ನಕಿರೀಟವು ಅದೃಶ್ಯವಾಗಿದೆ. ಭಾನುತೇಜರು ಕಿರೀಟವಿಲ್ಲದ ರಾಜರಾಗಿದ್ದಾರೆ. ರತ್ನಕಿರೀಟವಿಲ್ಲದೆ ಪಟ್ಟಕಟ್ಟಿಸಿಕೊಂಡ ಪ್ರಭು

ಅವನ ಇಷ್ಟಕ್ಕೆ ಸಮ್ಮತಿಸಿ ಅಲ್ಲಿಯೇ ಇದ್ದನು ಇಬ್ಬರೂ ರಹಸ್ಯ ಮಂದಿರಕ್ಕೆ ತೆರಳಿ ಮಂತ್ರಾಲೋಚನೆಗೆ ತೊಡಗಿದರು.

ಕಾಲವು ಹೋದಂತೆ ಪ್ರಮೋದನ ದುಃಖವು ಶಮನವಾಗುತ್ತಾ ಬಂದಿತು. ಮುಂದಾಕಿನಿ ಹೋದರೂ ಸತ್ತು ವಂಶಾಭಿವೃದ್ಧಿಗಾಗಿ ಭಾನುತೇಜ ಕುಮಾರನೊಬ್ಬನಿರುವನಲ್ಲ. ಎಂಬ ತೃಪ್ತಿಯಿಂದ ಪ್ರಮೋದನು ಕುಮಾರನನ್ನು ಎಷ್ಟೋ ಜಾಗರೂಕತೆಯಿಂದ ಕಣ್ಣಿನ ರೆಪ್ಪೆಯಂತೆ ಕಾಪಾಡುತ್ತಿದ್ದನು. ಈಗ ಅವನ ಸರ್ವಸ್ವವೂ ಭಾನುತೇಜನೆಂದರೆ ಅತಿಶಯೋಕ್ತಿಯಲ್ಲ.

ಮುಂದೆ ಬೇಗದಲ್ಲಿಯೇ ಭಾನುತೇಜನಿಗೆ ಪರಿಣಯವನ್ನೂ ಪಟ್ಟಾಭಿಷೇಕವನ್ನೂ ಮಾಡಿ ತಕ್ಕಮಟ್ಟಿಗೆ ಮನಃಶಾಂತಿಯನ್ನು ಪಡೆದನು.

ವನ್ನು ನಾವು ಅನುಮೋದಿಸಲಾರೆವು. ಆದ್ದರಿಂದ ಕಪ್ಪ ಕಟ್ಟುವುದಿಲ್ಲವೆಂದೇ ನಮ್ಮೆಲ್ಲರ ತೀರ್ಮಾನವಾಗಿದೆ...."

ಈ ಬಗೆಯ ಪತ್ರವನ್ನು ಓದಿ ಮುಗಿಸಿದಾಗ ರಾಜ ಮಂತ್ರಿಗಳಿಗೆ ವಿಚಾರ ಹಿಡಿಯಿತು. 'ಏನೋ ತಂಟೆ ಬರುತ್ತಿದೆ' ಎಂದು ಯೋಚಿಸಿದರು. "ಪ್ರತ್ಯುತ್ತರ ಕಳುಹಿಸುತ್ತೇವೆ" ಎಂದು ಹೇಳಿ ಆ ರಾಯಭಾರಿಯನ್ನು ವಾಪಸು ಕಳುಹಿಸಿ ಕೊಟ್ಟರು.

ತರುವಾಯ ಪ್ರಮೋದನು ಮಾವನಾದ ಕಿರಾತ ರಾಜನನ್ನು ಕುರಿತು,—"ಮಾವ, ನಮ್ಮ ಸಾಮಂತ ರಾಜರೆಲ್ಲಾ ಬಹಳ ಸಾಧುಗಳಾಗಿಯೂ ಸರಳ ಹೃದಯಿಗಳಾಗಿಯೂ ಇದ್ದರು. ಇಷ್ಟು ಕಾಲದಿಂದ ಇಲ್ಲದ ಈ ಮಾತು ಈಗೇಕೆ ಬಂದಿರಬಹುದು? ಈಗ ನಾವೇನು ಮಾಡೋಣ?" ಎಂದು ಯೋಚನೆ ಕೇಳಿದನು.

ಕಿರಾತರಾಜನು ಚೆನ್ನಾಗಿ ಯೋಚಿಸಿ— "ನಾವು ಉತ್ತರ ಬರೆದು ಕಳುಹಿಸುವುದಕ್ಕಿಂತಲೂ, ಸ್ವತಃ ರಾಯಭಾರಿಯನ್ನು ಕಳುಹಿಸುವುದೇ ಒಳ್ಳೆಯದು. ಈಗ ಸಾಮಂತ ರಾಜರ ಪರಿಸ್ಥಿತಿಯನ್ನು ನೋಡಿದರೆ, ಯಾವ ಸಮಯ ಹೇಗೆ ಬರುತ್ತೋ ಹೇಳಲಾಗುವುದಿಲ್ಲ. ಉದ್ಯೋಗಿಗಳನ್ನು ಕಳಿಸಬಾರದು. ಕಳುಹಿಸುವ ರಾಯಭಾರಿ ಒಳ್ಳೇ ನಂಬಿಗಸ್ಥನಾಗಿರಬೇಕು. ಸಾಮಂತ ರಾಜರನ್ನು ಮಾತುಗಳಿಂದ ದಾರಿಗೆ ತರುವ ಒಳ್ಳೇ ಚತುರನಾಗಿರಬೇಕು...." ಎಂದು ಸಲಹೆ ಹೇಳಿದನು.




ಆಗ ಪ್ರಮೋದನು ತಲೆದೂಗುತ್ತಾ— "ಮಾವಯ್ಯ ಚತುರಶ್ರೇಷ್ಠನಾದ ನಮ್ಮ ಮಂದಪಾಲನಿರುವಾಗ ಇನ್ನೊಬ್ಬನನ್ನು ಹುಡುಕುವುದೇಕೆ?—" ಎಂದಂದು ಕೂಡಲೇ ಮಂದಪಾಲನನ್ನು ಬರಮಾಡಿಕೊಂಡನು.

ಎಲ್ಲಾ ಪರಿಸ್ಥಿತಿಗಳನ್ನೂ ಮಂದಪಾಲನಿಗೆ ವಿವರಿಸಿ ಹೇಳಿ, ಪ್ರಮೋದನು ಒಂದು ಪತ್ರವನ್ನು ಕೂಡಾ ಬರೆದು ಕೊಟ್ಟನು.

ಬಳಿಕ ಅವನೊಡನೆ-"ನೀನು ರಾಯಭಾರಿಯಾಗಿ ಹೋಗಿ ನಾನು ಹೇಳಿದಂತೆ ಹೀಗೆ ಹೇಳು. 'ಮೊದಲು ಕಪ್ಪವನ್ನು ಕಟ್ಟಿ ಆಮೇಲೆ ಮಾತಾಡಬೇಕು. ರತ್ನಕಿರೀಟಧಾರಣವು

ನಮ್ಮ ಸ್ವಂತವಿಷಯಕ್ಕೆ ಸಂಬಂಧಪಟ್ಟಿದೆ. ನಿಮ್ಮಗಳ ರಾಜಕೀಯಕ್ಕೆ ಸಂಬಂಧಿಸಿದ್ದಲ್ಲ. ಇದೊಂದು ನೆವದಿಂದ ಕಪ್ಪಕಟ್ಟದೆ ಧಿಕ್ಕರಿಸಿದ ಪಕ್ಷದಲ್ಲಿ, ನೀವೆಲ್ಲರೂ ಅವಿಧೇಯರೆಂದು ನಾವು ತೀರ್ಮಾನಿಸಿಕೊಳ್ಳ ಬೇಕಾದೀತು.' ಹೀಗೆ ನಯಭಯಗಳಿಂದ ಅವರ ಮನಸ್ಸಿಗೆ ನಾಟುವಂತೆ ಮಾಡಿ, ನೀನು ಹಿಂದಿರುಗ ಬೇಕು" ಎಂದನು.

ಮತ್ತು ದಾರಿಯಲ್ಲಿ ತೊಂದರೆಯಾಗದಂತೆ ಪ್ರಯಾಣಮಾಡಲು ಅನುಕೂಲವಾಗಿ ರಾಜ ಮುದ್ರಿಕೆಯ ಉಂಗುರವನ್ನು ಕೂಡಾ ಮಂದ ಪಾಲನಿಗೆ ಕೊಟ್ಟು, "ಅಲ್ಲಲ್ಲಿಯ ಉಕ್ಕಡ ಗಳಲ್ಲಿ ಈ ರಾಜಮುದ್ರಿಕೆಯ ಉಂಗುರವನ್ನು ತೋರಿಸಿದರೆ, ನಿನಗೆ ಪ್ರಯಾಣಕ್ಕೆ ಬೇಕಾದ ಸಕಲ ಸೌಕರ್ಯಗಳೂ ದೊರೆಯುತ್ತವೆ. ಯಾವ ರಾಜ್ಯಕ್ಕಾದರೂ ಯಥೇಚ್ಛವಾಗಿ ಹೋಗಬಹುದು" ಎಂದು ಹೇಳಿ ಅವನನ್ನು ಕಳುಹಿಸಿಕೊಟ್ಟನು.

ಆಗ ಕಿರಾತರಾಜನು ತನ್ನ ಮಗನೊಂದಿಗೆ- "ಕುಮಾರಾ, ಹಿಡಿದ ಕಾರ್ಯದಲ್ಲಿ ವಿಜಯ ಶಾಲಿಯಾಗಿ ಬಾ. ಈ ವಿಷಯವನ್ನು ಯಾರಿಗೂ ತಿಳಿಸಬಾರದು. ಎಚ್ಚರಿಕೆ!" ಎಂದು ಎಚ್ಚರಿಸಿದನು.

ಹೀಗೆ ರಾಯಭಾರವನ್ನು ಕೈಗೊಂಡು ಮಂದಪಾಲನು ಪ್ರಯಾಣ ಹೊರಟನು. ರಾತ್ರಿಯೆನ್ನದೆ ಹಗಲೆನ್ನದೆ ಸಾಗುತ್ತಿದ್ದನು. ವಿಶ್ರಾಂತಿಗೆ ಅಲ್ಲಲ್ಲಿರುವ ರಾಜಬಿಡದಿಯಲ್ಲಿ ಳಿದುಕೊಳ್ಳುತ್ತಿದ್ದನು. ಅಲ್ಲಲ್ಲಿಯವರೆಗೆ ನಡೆದ ತನ್ನ ಹಳೆಯ ಕುದುರೆಗಳನ್ನು ಅಲ್ಲಲ್ಲಿಯೇ ಬಿಟ್ಟು ಹೊಸ ಕುದುರೆಯನ್ನೇರಿಕೊಂಡು ಮುಂದೆ ಮುಂದೆ ಹೋಗುತ್ತಿದ್ದನು. ಇದು ಆ ಕಾಲದ ಪ್ರಯಾಣದ ರೀತಿಯಾಗಿತ್ತು.

ಈ ಬಗೆಯ ಪದ್ಧತಿಯಿಂದ ಮೂರು ದಿನಗಳು ಪ್ರಯಾಣ ಮಾಡಿದನು. ನಾಲ್ಕ ನೆಯದಿನ ರಾತ್ರಿ ಒಂದು ಬಿಡದಿಯಲ್ಲಿಳಿದು ಮಲಗಿಕೊಂಡು ಬಳಲಿಕೆ ತೀರಿಸಿಕೊಳು ತ್ತಿದ್ದನು.

ಆಗ ಅವನ ಮನಸ್ಸಿನಲ್ಲಿ ಓಡುತ್ತಿದ್ದ ಸಮಸ್ಯೆ ಗಳು ಅಷ್ಟಿಷ್ಟಲ್ಲ. ಆಲೋಚನೆ ಮಾಡುತ್ತಾ ಅವನಿಗೆ ತಿಳಿಯದಂತೆಯೇ ಗಾಢನಿದ್ರೆಯಲ್ಲಿ ಮುಳುಗಿಹೋದನು.

ನಟ್ಟಿರುಳು; ಆಗ— (ಇನ್ನೂ ಇದೆ)






## 4

ಆಗ ತೇಕುತ್ತಾ ಒಬ್ಬ ಸೇವಕನು ಬಂದು, "ಪ್ರಭೂ! ಕಿರಾತರಾಜನೂ, ಭಾನುತೇಜನೂ ಸತ್ತುಹೋದರು !!" ಎಂದು ಹೇಳಿದನು.

ಈ ಮಾತನ್ನು ಕೇಳುತ್ತಲೇ, ರಾಜಗುರು ಏನೋ ದೊಡ್ಡ ಪೀಡೆ ಕಳೆದುಹೋದಂತೆ "ಸತ್ತರೆ? ಹೋಗಲಿ!" ಎಂದೆಂದು "ಆ ಹುಡುಗ ಶನಿಯನ್ನು ಕೂಡಾ ಹುಡುಕಿ ಹಿಡಿಯಿರಿ!" ಎಂದು ಎಚ್ಚರಿಕೆ ಕೊಟ್ಟನು. ಅಷ್ಟರಲ್ಲಿ ಯುದ್ಧರಂಗದಿಂದ ಎರಡು ಕಳೇಬರಗಳನ್ನೂ ಸಿಪಾಯಿಗಳು ಹೊತ್ತು ತಂದರು.

ರಾಜಗುರು ಹಾಗೆಂದುದಕ್ಕೆ ಮಂದಪಾಲನು ಮನಸ್ಸಿನಲ್ಲಿಯೇ ತುಂಬಾ ಖೇದಪಟ್ಟನು. ಆದರೆ ಏನೂ ಹೇಳಲಾರದೆ ಹೋದನು. ತಂದೆಯ ಮರಣಕ್ಕಾಗಿ ತುಂಬಾ ವ್ಯಸನಪಟ್ಟನು. ಇದನ್ನು ರಾಜಗುರು ಕಂಡುಹಿಡಿಯದೆ ಹೋಗಲಿಲ್ಲ. ಮಂದಪಾಲನಿಗೆ ತಂದೆಯ ಮೇಲೆ ಮಮತೆಯುಂಟಾಗುವುದನ್ನು ನೋಡಿ ಅವನಿಗೆ ಮಗನ ಮೇಲೆ ವಿರಕ್ತಿಯುಂಟಾಯಿತು.

ಈ ವಾರ್ತೆ ಕಿವಿಗೆ ಬೀಳುತ್ತಲೇ ಸೆರೆಮನೆಯಲ್ಲಿದ್ದ ಪ್ರಮೋದನಿಗೆ ಎದೆಯೊಡೆದಂತಾಯಿತು. ಭಾನುತೇಜನ ಹೆಂಡತಿ ಸ್ಮೃತಿ ತಪ್ಪಿ ಬಿದ್ದಳು

ಆ ಯುದ್ಧದಿಂದುಂಟಾದ ಮರಣವಾರ್ತೆಗಳನ್ನು ಕೇಳಿ, ಸಾಮಂತರೊಳಗೆಲ್ಲಾ ಹೆಚ್ಚಿಗೆ ದುಃಖಪಟ್ಟವನು ಅಮರಭೂಪತಿ ಹೌದು ಮತ್ತೆ—ಅವನ ಮಗಳೇ ಸೆರೆಯಲ್ಲಿದ್ದಾಳೆ! ಹಸುಕಂದನು ಕಾಣಲಾರದೆ ಹೋಗಿದ್ದಾನೆ!! ಅಳಿಯನು ಅರ್ಧಾಂತರದಲ್ಲೇ ಸತ್ತು ಹೋಗಿದ್ದಾನೆ!!! ಇದಕ್ಕಿಂತ ದುಃಖಕರವಾದ ಘಟನೆ ಬೇರೇನಿದೆ? ಇಷ್ಟು ದುಃಖದಲ್ಲಿ ಮುಳುಗಿದ್ದ ಅವನು ಪಟ್ಟಾಭಿಷೇಕದ ಉತ್ಸವದಲ್ಲಿ ಕಲೆತು



ಕೊಳ್ಳುವದು ಹೇಗೆ? ಆದರೂ ನಾಲ್ವರೊಂದಿಗೆ ಸೇರದೆ ಇರಲಿಕ್ಕಾಗುತ್ತದೆಯೆ? ಏನಿದ್ದರೂ ಅವನ ಶರೀರವೇ ಅಲ್ಲಿತ್ತಲ್ಲದೆ, ಮನಸ್ಸು ಇರಲೇ ಇಲ್ಲ! ಹೇಗಿದ್ದೀತು ಪಾಪ!

ಏನಾದರೂ ಸರಿ, ಪಟ್ಟಾಭಿಷೇಕ ನಡೆದೇ ತೀರಲಿ ಎಂದು ರಾಜಗುರು ಚಕಚಕನೆ ಅದರ ಏರ್ಪಾಡಿಗೆ ತೊಡಗಿದನು. ಈ ಸಂಧಿಗ್ಧ ಸಮಯದಲ್ಲಿ ಮಗಧ ರಾಜ್ಯದಿಂದ ಒಬ್ಬ ಸೇವಕನು ಬಂದು, ಅಮರಭೂಪತಿಯ ತಂದೆ ಸತ್ತುಹೋದನೆಂದು ವರ್ತಮಾನ ಕೊಟ್ಟನು.

ಕಷ್ಟದಮೇಲೆ ಕಷ್ಟವು ಬಿದ್ದು, ಅಮರಭೂಪತಿ ಬಹಳ ದುಃಖಿಸಿದನು. ಬಳಿಕ ರಾಜಗುರು ಮತ್ತು ಮಂದಪಾಲರ ಬಳಿಯಿಂದ ಅನುಮತಿ ಪಡೆದುಕೊಂಡು, ತನ್ನ ರಾಜ್ಯಕ್ಕೆ



ಹಿಂದಿರುಗಿ ಹೋದನು. ಆದರೆ ಅವನ ಮನಸ್ಸೆಲ್ಲಾ ಮೊಮ್ಮಗನ ಮೇಲೇ ಇತ್ತು.

ಹೆಸರಿಗೆ ಮಾತ್ರ ಪಟ್ಟಾಭಿಷೇಕವೆಂಬಂತೆ ಮಂದಪಾಲನಿಗೆ ಪಟ್ಟಾಭಿಷೇಕವು ಜರುಗಿತು. ಬಂದವರೆಲ್ಲಾ ಹೊರಟು ಹೋದರು.

ಈ ಪಟ್ಟಾಭಿಷೇಕವು ಪ್ರಜೆಗಳಿಗೆಲ್ಲಾ ಇಷ್ಟವಿರುವಂತೆ ಕಾಣಲಿಲ್ಲ. ಆದುದರಿಂದ ಭಲ್ಲಾಣ ರಾಜ್ಯದಲ್ಲಿ ದೊಡ್ಡದೊಂದು ಮಾರ್ಪಾಡು ಉಂಟಾಯಿತು. ಅದೇನೆಂದರೆ, ಈಗ ನಡೆದ ಯುದ್ಧವು ಕೇವಲ ಅಧರ್ಮ ಯುದ್ಧವೆಂದು ಎಲ್ಲರಿಗೂ ತಿಳಿಯಿತು. ಪ್ರಮೋದನೂ, ಭಾನುತೇಜನ ಪತ್ನಿಯೂ ಸೆರೆಯಲ್ಲಿರುವುದು, ಎಲ್ಲಿಂದಲೋ ಬಂದ ಮಂದಪಾಲನು ಸಿಂಹಾಸನವೇರುವುದು ಇದೆಲ್ಲಾ ಏನು? ನಿರಪರಾಧಿಯಾದ ಭಾನುತೇಜನೂ ಅವನನ್ನು ನೋಡಿಕೊಳ್ಳುತ್ತಿದ್ದ ಕಿರಾತರಾಜನೂ ಸತ್ತುದು, ಪಾಪ, ಸಣ್ಣ ಹುಡುಗ ಚಿತ್ರಭಾನು ಕಾಣದೇ ಹೋದುದು, ಇವೆಲ್ಲಾ ಪ್ರಜೆಗಳಿಗೆ ಸಹಿಸಲಾರದ ವಿಷಯಗಳಾದುವು.

“ನಮ್ಮ ರಾಜನನ್ನು ಬಿಡಿರಿ ಹೊರಗೆ! ನಮ್ಮ ಪಟ್ಟದ ಮಹಿಷಿಯನ್ನು ಹೊರಗೆ ಬಿಡಿರಿ!! ಪ್ರಮೋದ ಮಹಾರಾಜರೇ ನಮಗೆ ಪ್ರಭುವಾಗಿರಬೇಕು!!!” ಎಂದು ಪ್ರಜೆಗಳೆಲ್ಲಾ ಗೂಂದಲ ಮಾಡಿದರು.

ಮಂದಪಾಲನು ಏನೂ ಮಾತಾಡಲಾರದೆ ಹೋದನು. ರಾಜಗುರುವೇ ಸಮಾಧಾನಪಡಿಸಲೆತ್ನಿಸಿದನು. ಪ್ರಜೆಗಳ ಉದ್ದೇಶಕ್ಕೆ










ಅನುಕೂಲವಾಗಿ ಡಂಗುರವನ್ನು ಕೂಡಾ ಹೊಡೆಸಿದನು. ಆದರೆ ಅವೆಲ್ಲಾ ಯಾರ ಕಿವಿಗೂ ಏರಲಿಲ್ಲ. ಆನಂತರ ರಾಜಗುರು ಉಗ್ರನಾಗಿ ಪ್ರಜೆಗಳನ್ನು ಹಿಂಸೆಪಡಿಸಲು ಆರಂಭಿಸಿದನು. ಏನೂ ಪ್ರಯೋಜನ ಉಂಟಾಗಲಿಲ್ಲ..

ಇನ್ನು ಹಿಂಸಾಮಾರ್ಗದಿಂದ ಪ್ರಜೆಗಳನ್ನು ಶಾಂತಿಗೊಳಿಸಲಾಗದೆಂದು ರಾಜಗುರುವಿಗೆ ಗೊತ್ತಾಗಿಹೋಯಿತು. ತುಂಬಾ ಹೊತ್ತು ಆಲೋಚನೆ ಮಾಡಿ ಕಡೆಗೆ, 'ಇನ್ನು ಏಳು ವರ್ಷದವರೆಗೆ ನೀವಾರೂ ಕೀರ್ವೆ ಕೊಡಬೇಕಾಗಿಲ್ಲ' ಎಂದು ಸಾರಿಸಿಬಿಟ್ಟರೆ, ಖಂಡಿತವಾಗಿಯೂ ಜನರು ದಾರಿಗೆ ಬರುವರೆಂದು ನಿಶ್ಚಯಿಸಿಕೊಂಡುಬಿಟ್ಟನು. ಆದರೆ ಆ ಏಳುವರ್ಷ ರಾಜ್ಯವನ್ನು ಪರಿಪಾಲನೆ ಮಾಡುವುದು ಹೇಗೆ?—ಎಂಬ ಯೋಚನೆ ಬೆಟ್ಟದಂತೆ ಅಡ್ಡ ಬಂತು. ಭಲ್ಲಾಣ ರಾಜ್ಯದ ಖಜಾನೆ ಯುದ್ಧದಿಂದ ಖಾಲಿಯಾಗಿ ಹೋಗಿತ್ತು. ಇನ್ನೇನು ಮಾಡುವುದು? ಎಲ್ಲಾ ಯೋಚನೆಮಾಡಿ, ಕಡೆಗೆ ರಾಜಗುರು ಸಾಮಂತ ರಾಜರುಗಳಿಗೆ ಈ ಪ್ರಕಾರವಾಗಿ ಒಂದು ತಾಖೀದನ್ನು ಬರೆದು ಕಳಿಸಿದನು:—

"ನೀವುಗಳೆಲ್ಲಾ ನಿಷ್ಕಾರಣವಾಗಿ ಯುದ್ಧಕ್ಕೆ ಕಾರಣರಾದುದರಿಂದ, ಪ್ರಜೆಗಳೆಲ್ಲಾ ತುಂಬಾ ಬಾಧೆಪಟ್ಟಿದ್ದಾರೆ. ಅವರ ಕಷ್ಟನಷ್ಟಗಳಿಗೆ ಪರಿಹಾರಕೊಡಬೇಕಾದುದೀಗ ನಮ್ಮ ಹಾಗು ನಿಮ್ಮ ಕರ್ತವ್ಯವಾಗಿದೆ. ಏಳು ವರ್ಷಗಳ ವರೆಗೂ ಪ್ರಜೆಗಳಿಂದ ಏನೂ ಕೀರ್ವೆ ವಸೂಲು ಮಾಡಬಾರದೆಂದೂ, ರಾಜ್ಯವು ಮಾಮೂಲು ಸ್ಥಿತಿಗೆ ಬರುವವರೆಗೂ ಪ್ರಜೆಗಳಿಗೆ ಬೇಕಾದ ಸದುಪಾಯಗಳನ್ನೆಲ್ಲ ಮಾಡಿಕೊಡಬೇಕೆಂದೂ ನಾವು ನಿಶ್ಚಯಿಸಿಕೊಂಡಿದ್ದೇವೆ. ಈ ಕಾರ್ಯವು ಕೊನೆಗಾಣಲಿಕ್ಕೆ ನೀವುಗಳೂ ಸಹಾಯಪಡಬೇಕು. ಈಗ ಜರೂರಾಗಿ ಈ ಸಮಯದಲ್ಲಿ ನೀವು ನಮ್ಮ ಖಜಾನೆಗೆ ಸೇರಿಸಬೇಕಾದ ಕಪ್ಪವನ್ನು ಇಮ್ಮಡಿಯಾಗಿ ಮಾಡಿ ಕೂಡಲೇ ಕಳಿಸಿಕೊಡಬೇಕು. ಇದೇ ನೀವು ಮಾಡುವ ಮೊದಲನೇ ಸಹಾಯ...."

ಈ ತಾಖೀದನ್ನು ನೋಡುತ್ತಲೇ ಸಾಮಂತರೆಲ್ಲಾ ಘೂರ್ಜರರಾಜನ ಕೈಕೆಳಗೆ ಸಮಾವೇಶಗೊಂಡರು. ಇದ್ದ ನಮ್ಮ ರಾಜನನ್ನು ಹೋಗಲಾಡಿಸಿಕೊಂಡು, ಇಲ್ಲದ ಸಲ್ಲದ ರಾಜ






ನನ್ನು ತುದುಕೊಂಡೆವಲ್ಲಾ ಎಂದು ಅವರೆಲ್ಲಾ ತುಂಬಾ ವಿಚಾರಪಟ್ಟರು. ಎಷ್ಟೋ ಚರ್ಚಿಸಿಕೊಂಡರೂ ಒಂದು ನಿಶ್ಚಯಕ್ಕೆ ಬರಲಿಲ್ಲ ಕಡೆಗೆ ಅವರು ಅಮರಭೂಪತಿಯನ್ನೇ ಕರೆದು ಆಲೋಚನೆ ನಡೆಸಿದರು. ಅನುಭವಶಾಲಿಯಾದ ಅಮರಭೂಪತಿ, ಒಳ್ಳೇದು ಕೆಟ್ಟದುಗಳನ್ನು ಚೆನ್ನಾಗಿ ಯೋಚಿಸಿಕೊಂಡು ಹೀಗೆಂದನು:

"ಈಗ ನಾವೆಲ್ಲಾ ಸಹನೆಯನ್ನು ಚೆನ್ನಾಗಿ ಅವಲಂಬಿಸಿಕೊಳ್ಳಬೇಕಾಗಿದೆ. ನಾವು ಕೊಂಚ ಉದ್ರೇಕಪಟ್ಟರೂ, ದುಡುಕಿ ಏನೇ ಮಾಡಿದರೂ ಆ ರಾಜಗುರುವಿನ ಕೈಯೊಳಗಿರುವ ಪ್ರಮೋದನಿಗೂ, ಅವನ ಸೊಸೆಗೂ ಅಪಾಯವಾದೀತು. ರಾಜಗುರು ಬಹಳ ಕ್ರೂರ. ಏನು ಮಾಡಲಿಕ್ಕೂ ಹಿಂಜರಿಯುವವನಲ್ಲ. ಆದುದರಿಂದ ಈ ಪರಿಸ್ಥಿತಿಯಲ್ಲಿ ನಾವು, ಅವನು ಕೊಡುವ ಹಿಂಸೆಗಳನ್ನೆಲ್ಲಾ ಸಹಿಸಿಕೊಂಡೇ ಇರಬೇಕಾಗಿದೆ. ನಾವೀಗ ಮಗು ಚಿತ್ರಭಾನುವನ್ನ ಹೇಗಾದರೂ ಹುಡುಕಿ ಹಿಡಿದು ಕಾಪಾಡಬೇಕಾದುದು ಮುಖ್ಯವಾಗಿದೆ...." ಎಂದು ಸಲಹೆಕೊಟ್ಟನು.

ಸಾಮಂತರಿಗೆಲ್ಲಾ ಈ ಮಾತು ಬಹಳ ಹಿಡಿಸಿತು. ಆ ಹುಡುಗನನ್ನು ಹುಡುಕಲಿಕ್ಕಾಗಿ ಕೆಲವರು ಚಾರರನ್ನು ನಾಲ್ಕು ದಿಕ್ಕುಗಳಿಗೂ ಕಳಿಸಿದರು.

ಅನಂತರ ಸಾಮಂತರಾಜರೆಲ್ಲರೂ ಕೂಡಿ ರಾಜಗುರುವಿಗೆ ಹೀಗೆ ಉತ್ತರ ಬರೆದು ಕಳುಹಿಸಿದರು:—"ನಿಮ್ಮ ಭೋಧನೆಗಳನ್ನೆಲ್ಲಾ ನಾವು ಅಕ್ಷರಶಃ ಶಿರಸಾವಹಿಸುತ್ತೇವೆ. ಯುದ್ಧದ ಬಗ್ಗೆ ನಮಗೂ ತುಂಬಾ ಖರ್ಚಾಗಿದೆ. ರತ್ನಕಿರೀಟವಿಲ್ಲದ ರಾಜನಿಗೆ ಕಪ್ಪಕಟ್ಟಬಾರದೆಂದು ನೀವೇ ಹೇಳಿದ್ದರಿಂದ ನಿಜವೆಂದುಕೊಂಡು ನಾವು ಆಗ ಹಾಗೆ ಬರೆದೆವು. ಅದರ ಪ್ರತಿಕ್ರಿಯೆಯಾಗಿ ಬಂದ ಯುದ್ಧದಲ್ಲಿ ಪಾಲುಗೊಂಡು, ಎಷ್ಟೋ ಕಷ್ಟನಷ್ಟಗಳಿಗೆ ಒಳಗಾದೆವು. ಈಗ ಈ ರೀತಿಯಾಗಿ ನಿಮ್ಮ ಮನಸ್ಸು ತಿರುಗಿಹೋದೀತೆಂದು ನಾವು ಭಾವಿಸಲಿಲ್ಲ. ಯುದ್ಧರಂಗದಿಂದ ಮನೆಗೆ ಮುಟ್ಟುವ ಮೊದಲೇ ಕಪ್ಪಕಟ್ಟಬೇಕೆಂದು ನೀವು ಶಾಸನ ಮಾಡುವಿರೆಂದು, ನಾವು ಸ್ವಪ್ನದಲ್ಲಿಯೂ ನನೆಸಿರಲಿಲ್ಲ. ಅದನ್ನೀಗ ಇಮ್ಮಡಿಸಿಕೊಳ್ಳಬೇಕೆನ್ನುವಿರಿ. ಭಲ್ಲಾಣ ರಾಜ್ಯವು ನಿಮ್ಮ ಕೈಗೆ

ಸಿಕ್ಕುತ್ತಲೇ ನೀವು ವಾಗ್ದಾನ ಮಾಡಿದಂತೆ ನಮಗೇನೋ ಸ್ವರ್ಗ ಸುಖ ಸಿಕ್ಕುವುದೆಂದು ಆಶೆಪಟ್ಟೆವು. ಅದೀಗ ನರಕವಾಗಿ ಮಾರ್ಪಟ್ಟಂತಾಯಿತು. ನಮ್ಮ ಕಷ್ಟಗಳನ್ನು ನಿಮ್ಮೊಡನೆ ಮೊರೆಯಿಟ್ಟುಕೊಳ್ಳೋಣವೆಂದರೆ, ಈಗ ನೀವು ಅದನ್ನು ಕೇಳುವ ಪರಿಸ್ಥಿತಿಯಲ್ಲಿಯೇ ಇಲ್ಲದ್ದರಿಂದ, ನಾವು ಇಷ್ಟಕ್ಕೇ ವಿರಮಿಸಿಕೊಳ್ಳುತ್ತೇವೆ."

ಸಾಮಂತರಿಂದ ಬಂದ ಈ ಬಗೆಯ ಪ್ರತ್ಯುತ್ತರವನ್ನು ನೋಡಿ ರಾಜಗುರುವಿಗೆ ಏನು ಮಾಡಲಿಕ್ಕೂ ಸಾಧ್ಯವಿಲ್ಲದೆ ಹೋಯಿತು. "ನನ್ನ ಮಂತ್ರವೇ ನನಗೆ ತಿರುಗಿ ಬಡೆಯಿತಲ್ಲ! ನಾನು ಹೇಳಿದ ಉಪಾಯಗಳೇ ನನಗೆ ಭಸ್ಮಾಸುರ ವರದಂತಾಯಿತಲ್ಲಾ!" ಎಂದು ಚಡಪಡಿಸುತ್ತ ತೀವ್ರವಾದ ಚಿಂತೆಯಲ್ಲಿ ಬಿದ್ದನು.

ಅತ್ತ ಪ್ರಜೆಗಳ ಘೋಷಣೆ! ಇತ್ತ ಸಾಮಂತರ ದೂಷಣೆ!! ಖಂಡಿತವಾಗಿ ಏನಾದರೂ ಹಿತ್ತಾಯ ಪಡಿಸಿದರೆ, ಅವರೆಲ್ಲಿ ಯುದ್ಧಕ್ಕೆ ಬರುವರೋ ಎಂಬ ಭಯದಿಂದ ಬಾಯಿಮುಚ್ಚಿ ಕೇಳಿಕೊಳ್ಳಬೇಕಾಯಿತು. ಏನಾದರೂ ಹೇಳಿ ನಂಬಿಸೋಣವೆಂದರೆ ಮುದುಕ ರಾಜನನ್ನೂ, ಭಾನುತೇಜನ ಪತ್ನಿಯನ್ನೂ ಬಿಟ್ಟುಕೊಟ್ಟ ಹೊರತು, ಪ್ರಜೆಗಳು ಸುಮ್ಮನಿರುವಂತಿಲ್ಲ. ಬಿಟ್ಟುಕೊಟ್ಟರೆ ಕಥೆಯೇ ಅಡ್ಡ ತಿರುಗಿಬಿಟ್ಟೀತು. ಇದರಲ್ಲಿ ಮೊದಲು ಯಾವದಾದರೊಂದು ಅವಾಂತರವನ್ನು ದಾಟದೆ ಉಪಾಯವೇ ಇರಲಿಲ್ಲ....ಹೀಗೇ




ಯೋಚನೆ ಮಾಡುವಾಗ, ಅವನಿಗೆ ಮಿಂಚಿನಂತೆ ಒಂದು ಹೊಸ ಯೋಚನೆ ಹೊಳೆಯಿತು. ಆದರೆ ಅದರೊಂದಿಗೆ ಮಂಡಪಾಲನು ಏಕೀಭವಿಸುವನೆಂಬ ನಂಬಿಕೆ ಕಾಣಲಿಲ್ಲ.

ರಾಜಗುರು ತನ್ನ ಮಗನನ್ನು ಕರೆದು ತನ್ನ ಹೊಸ ವ್ಯೂಹವನ್ನು ಕುರಿತು ಹೇಳಿದನು. ಅವನು ಕೂಡಲೇ ಅನುಮೋದಿಸಿದನು. ಅಷ್ಟೇ ಅಲ್ಲ, ಈ ವ್ಯೂಹವು ನೆರವೇರಿದರೆ, ತನಗೆ ಬಹುಕಾಲದಿಂದಿದ್ದ ಕೋರಿಕೆ, ಭಲ್ಲಾಣರಾಜ್ಯವನ್ನು ಆಕ್ರಮಿಸಬೇಕೆಂಬ ತನ್ನ ಆಶೆ ಖಂಡಿತ ನೆರವೇರುವುದೆಂದೂ ಸಂತೋಷಪಟ್ಟನು.

ಮಗನ ಈ ಅಭಿಲಾಷೆಯನ್ನು ಕೇಳುತ್ತಲೇ ರಾಜಗುರುವಿನ ಮನಸ್ಸು ವಿಚಿತ್ರವಾಗಿ ಮಾರ್ಪಟ್ಟಿತು. ಆಗ ಹುಡುಕಲಿಕ್ಕೆ ಹೋಗಿದ್ದ ಸೇವಕರು ಬಂದು ಚಿತ್ರಭಾನು ಸತ್ತೇಹೋಗಿ





ವೈಭವವನ್ನು ನೋಡುವಂತಾಯಿತೆಂದು ರಾಜ ಗುರು ಉಬ್ಬುತ್ತಿದ್ದನು.

ತಂದೆ ಮಕ್ಕಳು ಅಂದುಕೊಂಡ ಪ್ರಕಾರವೇ ಒಂದುದಿನ ರಾಜಗುರುವಿನ ಮಗನು ಗುಟ್ಟಾಗಿ ಕೆಲವು ಆಳುಗಳನ್ನು ಕರೆದನು. ಅದ್ಭುತವಾದ ಸಾಧನೆಗಳನ್ನು ಹೇಳಿಕೊಟ್ಟನು. ಮತ್ತೇನಲ್ಲ, ಕಾರಾಗಾರಕ್ಕೆ ಬೆಂಕಿ ಹಚ್ಚುವಂತೆ ಹೇಳಿದನು. ಯಾವಯಾವ ಭಾಗಗಳು ಮೊದಲು ಹೊತ್ತಿಕೊಳ್ಳಬೇಕೋ ಅದನ್ನು ಅರ್ಥವಾಗುವಂತೆ ವಿವರಿಸಿದನು. ಇದೊಂದೂ ಬೇರೆಯಾರಿಗೂ ಗೊತ್ತಾಗದಂತೆ ಬಹು ಜಾಗ್ರತೆ ವಹಿಸಿದನು.

ಅಂದುಕೊಂಡಂತೆ ತುಸು ಮುಂಚಿತವಾಗಿಯೇ ಕಾರಾಗಾರಕ್ಕೆ ಬೆಂಕಿ ಹಿಡಿಯಿತು. ನೋಡಿ ನೋಡುವುದರೊಳಗೆ ಬೆಂಕಿ ಆಕಾಶಕ್ಕೆ ಚಾಚಿಕೊಂಡು ವ್ಯಾಪಿಸಿತು. ರಾಜಗುರುವಿನ ಮಗನಿಗೆ ಯಾಕೋ ಏನೋ ಥಕ್ಕನೆ ಒಂದು ಸಂದೇಹ ಬಂತು. ಪ್ರಮೋದನ ಕೋಣೆಗೆ ಬೆಂಕಿ ಹಿಡಿದಿದೆಯೋ ಇಲ್ಲವೊ! ಭಾನುತೇಜನ ಹೆಂಡತಿಯ ಕೋಣೆ ಬೆಂಕಿಗೆ ಆಹುತಿ ಆಯಿತೋ ಇಲ್ಲವೊ? ಒಂದು ವೇಳೆ ಅವರು ತಪ್ಪಿಸಿಕೊಂಡರೇನೋ! ಅವರು ಸಾಯುವುದನ್ನು ಕಣ್ಣಾರೆ ಕಂಡೇ ನಿರ್ಧರಿಸಿಕೊಳ್ಳಬೇಕು, ಎಂದು ಅವನಿಗೆ ತೋರಿತು. ಕೂಡಲೇ ಅವನು ಆ ಎರಡು ಕೋಣೆಗಳ ಕಡೆಗೆ ಗಬಗಬನೆ ಓಡಿದನು. ಆಗ ಜ್ವಾಲಾಮಾಲೆಯಾಗಿ ಉರಿಯುತ್ತಿದ್ದ ಮೇಲಿನ ದೊಡ್ಡ ತೊಲೆಯೊಂದು ಅವನ ಮೇಲೆ ಬಿತ್ತು!....

ರುವನೆಂದು ಕೂಡಾ ಹೇಳಿದ್ದು ಕೇಳಿ ಅವನಿಗೆ ಇನ್ನಷ್ಟು ಸಮಾಧಾನವಾಯಿತು. ಈಗ ಅವನಿಗೆ ಮಂದಪಾಲನನ್ನು ಆಚೆಗೆ ತಳ್ಳಿಹಾಕಿ, ತನ್ನ ಮಗನನ್ನೆ ಗದ್ದುಗೆಗೇರಿಸಬೇಕೆಂಬ ಆಶೆ ಅಂಕುರಿಸಿ ಬೇಗಬೇಗನೆ ಬೆಳೆಯಿತು. ತಂದೆ ಮಗಂದಿರು ಈ ಕುರಿತು ಗಾಢಾಲೋಚನೆ ಮಾಡಿಕೊಂಡರು.

ತಮ್ಮ ತಂತ್ರವನ್ನು ಮರುದಿನವೇ ಸಾಗಿಸಬೇಕೆಂದು ನಿಶ್ಚಯ ಮಾಡಿಕೊಂಡರು. "ನಾನು ಅಲ್ಲಿಯೇ ಇದ್ದು ಎಲ್ಲಾ ಏರ್ಪಾಡನ್ನೂ ಸ್ವಯಂ ಮಾಡಿ ಬಿಡುತ್ತೇನೆ." ಎಂದು ಕುಮಾರನು ತಂದೆಗೆ ಧೈರ್ಯ ಹೇಳಿದನು. ಮಗನ ಧೈರ್ಯಕ್ಕೆ ತಂದೆ ಮೆಚ್ಚಿದ. ಇನ್ನೇನು? ಆಹಾ! ತನ್ನ ಮುದ್ದು ಮಗನು ಭಲ್ಲಾಣ ರಾಜನಾಗುವ





ಬ್ರಹ್ಮಾಂಡವಾದ ಬೆಂಕಿಯನ್ನು ಕಂಡು ನಗರವೆಲ್ಲಾ ಅಲ್ಲಕಲ್ಲೋಲವಾಯಿತು. ಪ್ರಜೆಗಳೆಲ್ಲಾ ಓಡೋಡಿ ಬರುತ್ತಿದ್ದರು. ಪ್ರಜೆಗಳ ಅಳುವ ದನಿ ಕಲ್ಲೂ ಕರಗುವಂತಾಯಿತು.

ಯಾರ ಅಳುವನ್ನೂ ದುಃಖವನ್ನೂ ಅಗ್ನಿದೇವನೇನೂ ಲಕ್ಷ್ಯಮಾಡಿಲ್ಲ. ತನ್ನ ಸ್ವಾಹಾ ಕಾರ್ಯವನ್ನು ಭರದಿಂದ ಸಾಗಿಸುತ್ತಿದ್ದನು. ದೊಡ್ಡ ದೊಡ್ಡ ಜ್ವಾಲೆಗಳು ಆಕಾಶಕ್ಕೆ ಚಾಚಿಕೊಂಡು, ರಾತ್ರಿ ಹಗಲಾಗಿ ಕಾಣುತ್ತಿತ್ತು.

ಹಲವರು ಸಾಹಸ ಪಟುಗಳು ನೀರು ಹಾಕಿ ಹಾಕಿ ಬೆಂಕಿಯನ್ನು ನಂದಿಸಲು ನೋಡಿದರು. ಕೆಲವರು ಮಳಲನ್ನು ಬಾಚಿ ಬಾಚಿ ಸುರಿದರು. ಧೈರ್ಯಶಾಲಿಗಳು ಕೆಲವರು ಒಳಕ್ಕೆ ತೂರಿ ಕಾರಾಗೃಹದ ಬಾಗಿಲನ್ನು ಒಡೆದು, ಒಳಗಿದ್ದವರನ್ನು ಹೊರಗೆ ಎಳೆದು ಹಾಕಿದರು.

ಇಷ್ಟರಲ್ಲಿ ಈ ವಾರ್ತೆ ಕೋಟೆಯೊಳಕ್ಕೆ ಹೊಕ್ಕು ಮಂಡಪಾಲನಿಗೆ ತಿಳಿಯಿತು. ಚಡಪಡಿಸಿದನು. "ಇದೇನು ಘೋರ! ಯಾರು ಮಾಡಿದ ಕೆಲಸ? ಈ ಪ್ರಮಾದದಲ್ಲಿ ಭಾನು ತೇಜನ ಪತ್ನಿಯೇ ತೀರಿಹೋದರೆ ನಾನೇ ಈ ಕೆಲಸ ಮಾಡಿಸಿದೆನೆಂದು ಪ್ರಜೆಗಳು ನನ್ನ ಮೇಲೆ ಎದುರುಬಿದ್ದರೆ ಏನು ಮಾಡಲಿ? ಈಗಿನ ಪರಿಸ್ಥಿತಿಯಲ್ಲಿ ನನ್ನ ತಲೆಯಮೇಲೆ ಇಂತಹ ಅಪವಾದವು ಬಿದ್ದರೂ ಆಶ್ಚರ್ಯವೇನಿಲ್ಲ...." ಹೀಗೆಲ್ಲಾ ಯೋಚಿಸಿಕೊಂಡು, ಮಂದಪಾಲನು ಕಾರಾಗಾರದ ಕಡೆಗೆ ಓಡಿದನು. ಎಷ್ಟು ಮಂದಿ ಬೇಡೆಂದರೂ ಕೇಳದೆ ಸಾಹಸಮಾಡಿ ಒಳಕ್ಕೆ ಹೊಕ್ಕನು. ಪ್ರಮೋದನನ್ನು ಬಂಧಿಸಿದ ಕೋಣೆಯ ಬಾಗಿಲನ್ನು ಭೇದಿಸಿ, ಒಳಹೊಕ್ಕು, ಪ್ರಮೋದನನ್ನು ಭುಜದಲ್ಲೇರಿಸಿಕೊಂಡು ಹೊರಗೆ ಬಂದನು. ಪುನಃ ಹೋಗಿ ಭಾನುತೇಜನ ಪತ್ನಿಯ ಕೋಣೆಯನ್ನು ಒಡೆದು ಒಳಹೊಕ್ಕು ನೋಡಿದನು. ಅವಳು ಸತ್ತು ಮಸಿಯಾಗಿ ಹೋಗಿದ್ದಾಳೆ! ಇದನ್ನು ಕೇಳಿ ಎಲ್ಲರೂ ಗೊಳೋ ಎಂದು ಅತ್ತರು!

ಪಾಪ! ಕೋಣೆಯೊಳಗೆ ಸಿಕ್ಕಿಬಿದ್ದ ಅವಳಿಗೆ ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವಾಗಲೇ ಇಲ್ಲ.

ಏನು ಘೋರ! ಎಂಥ ಬೀಭತ್ಸ! ಇನ್ನೂ ಎಷ್ಟೋ ಕೋಣೆಗಳಲ್ಲಿ ಅನೇಕರು ಸತ್ತು ಮಸಿಯಾಗಿದ್ದಾರೆ!!!

ಆಗ ರಾಜಗುರು ಅಲ್ಲಿಗೆ ಬಂದ. ಬುದ್ಧಿ ಕೆಟ್ಟವನ ಹಾಗೆ ಕಾರಾಗೃಹವನ್ನೆಲ್ಲಾ ಸುತ್ತಾ

ಡಿದ. ಸುಟ್ಟ ತೊಲೆಯ ಕೆಳಗೆ ತನ್ನ ಮಗನು ಸತ್ತುಬಿದ್ದಿರುವುದನ್ನು ನೋಡಿ, ಸ್ಮೃತಿ ತಪ್ಪಿ ಅಲ್ಲಿಯೇ ಬಿದ್ದುಬಿಟ್ಟ!!

ತಾಯಿಯನ್ನು ಅಗಲಿ ಹೋದ ಚಿತ್ರಭಾನು "ನೀರು ನೀರು" ಎನ್ನುತ್ತಾ ಓಡುತ್ತಿದ್ದನು. ಆಗ ಅವನಿಗೆ ಒಬ್ಬ ಮಹರ್ಷಿಯ ದರ್ಶನ ವಾಯಿತು. ಅವನು ಬೇರೆ ಯಾರೂ ಅಲ್ಲ; ಮೊತ್ತಮೊದಲು ಪ್ರಮೋದ ರಾಜನಿಗೆ ಹಣ್ಣನ್ನು ಮಂತ್ರಿಸಿಕೊಟ್ಟ, ಸಿದ್ಧ ಪುರುಷನೇ ಅವನು! ಮಿತ್ರಾನಂದ ಮಹರ್ಷಿ!

ಆತನು ಒಂದು ಮಹಾ ಯಾಗಕ್ಕೆ ಪ್ರಾರಂಭಿಸಿದ್ದನು. ಸಂಕಲ್ಪಸಿದ್ಧಿಗಾಗಿ ಶಿಷ್ಯವೃಂದ ದೊಂದಿಗೆ ಭಲ್ಲಾಣ ರಾಜ್ಯದ ಸಮೀಪದ ಅಡವಿಯಲ್ಲಿ ಪ್ರಸ್ತುತ ತಂಗಿದ್ದನು.

ಯಾಗಕ್ಕೆ ಬೇಕಾದ ಸಾಮಗ್ರಿಗಾಗಿ ಅವನು ನಡೆಯುತ್ತಿದ್ದಾಗ ಚಿತ್ರಭಾನುವನ್ನು ಕಂಡನು. ಒಡನೆಯೇ ಅವನು ಆ ತಬ್ಬಲಿ ಬಾಲನನ್ನು ಕುರಿತು, ತನ್ನ ದಿವ್ಯದೃಷ್ಟಿಯಿಂದ ನೋಡಿ, ಅವನ ಎಲ್ಲಾ ವಿಚಾರವನ್ನೂ ಅರಿತುಕೊಂಡನು. "ಮಗೂ, ನಿನ್ನ ಈ ಕೊಳೆಯಂಗಿಯನ್ನು ಬಿಚ್ಚಿ ಆಚೆಗೆ ಬಿಸುಡು" ಎಂದನು ಋಷಿ. ಬಳಿಕ ಅವನನ್ನು ಲಾಲಿಸುತ್ತಾ ತನ್ನ ಆಶ್ರಮಕ್ಕೆ ಕರೆದೊಯ್ದನು.

ಚಿತ್ರಭಾನು, ಅಲ್ಲಿಯೇ ಬೆಳೆಯುತ್ತಿದ್ದನು. ಗುರು ಅವನಿಗೆ ಸಕಲ ವಿದ್ಯೆಗಳನ್ನೂ ಕಲಿಸಲಾರಂಭಿಸಿದನು. ಹುಡುಗನೂ ಚುರುಕು ಬುದ್ಧಿಯವನಾದುದರಿಂದ, ವೇಗವಾಗಿ ಕಲಿಯುತ್ತ, ಗುರುವಿಗೆ ಪ್ರಿಯಶಿಷ್ಯನಾದನು. ಮಿತ್ರಾನಂದನು ಅವನನ್ನು ಬಹಳ ಅಭಿಮಾನದಿಂದ ನೋಡುತ್ತಾ, ಕ್ಷತ್ರಿಯೋಚಿತವಾದ ಬಿಲ್ಲುವಿದ್ಯೆ, ಕುದುರೆ ಸವಾರಿ, ಖಡ್ಗ ವಿದ್ಯೆ—ಮೊದಲಾದುವನ್ನೂ ಕಲಿಸಿ ಅವನನ್ನು ಒಳ್ಳೇ ಪ್ರವೀಣನನ್ನಾಗಿ ಮಾಡಿದನು.

ಹೀಗೆ ಚಿತ್ರಭಾನು ಹತ್ತು ಸಂವತ್ಸರಗಳವರೆಗೂ ಮಿತ್ರಾನಂದ ಮಹರ್ಷಿಯೊಂದಿಗೆ ಇದ್ದನು. ಅವನೊಬ್ಬ ಉತ್ತಮ ವೀರ ಪುರುಷನಾಗಿ ಮಾರ್ಪಟ್ಟು ಕಂಗೊಳಿಸಿದನು. ಇಲ್ಲಿಯವರೆಗೂ ಇವನ ವಿಷಯ ಚೆನ್ನಾಗಿಯೇ ನಡೆಯಿತು. ಆದರೆ, ಪಾಪ- ಅವನ ವಿಷಯದಲ್ಲಿ ಒಂದು ಗಟ್ಟಿಯಾದ ಸಿಕ್ಕು ತಟಸ್ಥವಾಯಿತು. ಅವನ ವಿದ್ಯಾಭ್ಯಾಸವೆಲ್ಲಾ ಪೂರ್ಣವಾಯಿತು, ನಿಜ, ಆದರೆ.... [ಇನ್ನೂ ಇದೆ]






## 5

ಆದರೆ ಚಿತ್ರಭಾನುವಿಗೆ ದಿನಾ ಒಂದೊಂದು ಕನಸು ಬೀಳಲು ಪ್ರಾರಂಭವಾಯಿತು. ಆ ಕನಸಿನಲ್ಲಿ "ಅಪ್ಪಾ, ಚಿತ್ರಭಾನು, ನನ್ನ ಆತ್ಮಕ್ಕೆ ಶಾಂತಿಯನ್ನುಂಟುಮಾಡಲಾರೆಯಾ? ಚಿತ್ರಭಾನು, ನನ್ನ ಆತ್ಮಕ್ಕೆ ಶಾಂತಿಯನ್ನುಂಟು ಮಾಡಲಾರೆಯಾ?" ಎಂದು ಯಾರೋ ತುಂಬಾ ದೈನ್ಯತೆಯಿಂದ ಕೇಳುತ್ತಿರುವಂತೆ ಕನಸು ಕಂಡನು.

ಹುಡುಗನಿಗೆ ಇದರ ಅರ್ಥ ತಿಳಿಯಲಿಲ್ಲ. ಪ್ರತಿದಿನಾ ಆ ಕನಸಿನಲ್ಲಿ ಕಾಣುವ ವ್ಯಕ್ತಿಯು ಮತ್ತೂ ದೈನ್ಯತೆಯಿಂದ ಕೇಳಿಕೊಳ್ಳುತ್ತಿರುವಂತೆ ಕಾಣುತ್ತಿತ್ತು.

ಇದೊಂದು ಕನಸು ತಾನೇ ಎಂದು ಮೊದಮೊದಲು ಉದಾಸೀನ ವಹಿಸಿದ ಚಿತ್ರಭಾನು. ಆದರೆ ದಿನಂಪ್ರತಿ ಅದೇ ಕನಸು ಬೀಳುತ್ತಿದ್ದುದರಿಂದ ಆ ಬಾಲಕನಿಗೆ ಇದೊಂದು ಧರ್ಮಸಂಕಟವಾಗಿ ತೋರಿತು.

ಏನು ಮಾಡಲೂ ತೋರದೆ ಒಂದು ದಿನ ಈ ವಿಷಯವನ್ನು ಗುರುಗಳಿಗೆ ಹೇಳಿ ಇದರಲ್ಲೇನಾದರೂ ರಹಸ್ಯವಿದೆಯೇ ಎಂದು ಕೇಳಿದ.

ಅದಕ್ಕೆ ಮಿತ್ರಾನಂದನು "ಇಲ್ಲದೇನು ಮಗು. ಇಂತಹ ಕನಸು ಬೀಳುವುದರಲ್ಲಿ ಎಷ್ಟೋ ಗೂಢಾರ್ಥಗಳಿರುತ್ತವೆ. ಲಾಲಿಸು" ಎಂದು ಈ ರೀತಿ ಹೇಳಲು ಪ್ರಾರಂಭಿಸಿದ.

"ದೇವರಾಜನಾದ ಇಂದ್ರನ ಸಭೆಯಲ್ಲಿ ಒಬ್ಬಾನೊಬ್ಬ ಗಂಧರ್ವ ಸಿದ್ಧ. ಆತನಿಗೆ ಇಬ್ಬರು ಮಡದಿಯರು. ಹಿರಿಯಾಕೆಗೆ ಒಬ್ಬ ಕುಮಾರನೂ, ಕಿರಿಯಾಕೆಗೆ ಒಬ್ಬ ಮಗನೂ ಇದ್ದರು. ದೇವೇಂದ್ರನ ಸಭೆಯಲ್ಲಿ ಆ ಗಂಧರ್ವ



ಉನ್ನತೋದ್ಯೋಗಿ. ಈ ಕೆಲಸದ ಅವಧಿ ಮುಗಿದ ಕೂಡಲೇ ಆತನ ಸಂತತಿ ಆ ಪದವಿಯನ್ನು ಹೊಂದಬಹುದು. ಸಂತತಿ ಇಲ್ಲದಿದ್ದ ಪಕ್ಷಕ್ಕೆ ಆತನೇ ಮತ್ತೆ ಇಪ್ಪತ್ತು ವರ್ಷ ಆ ಕೆಲಸವನ್ನು ನೋಡಿಕೊಳ್ಳಬಹುದು. ಇದು ಆ ಉದ್ಯೋಗದ ಪದ್ಧತಿ.

ಆ ಗಂಧರ್ವನ ಉದ್ಯೋಗದಕಾಲ ಪೂರ್ತಿಯಾಯಿತು. ಆ ಕೆಲಸ ಹಿರಿಯ ಮಗನಿಗೆ ಬರಬೇಕಾದುದು ನ್ಯಾಯಸಮ್ಮತ. ಆದರೆ ಅದನ್ನು ತಪ್ಪಿಸಿ ತನ್ನ ಮಗನಿಗೆ ಆ ಪದವಿ ಕೊಡಿಸಬೇಕೆಂದು ಕಿರಿಯಾಕೆಯ ಹಂಬಲ.

ಕಿರಿಯಾಕೆ ಗಡುಸುಸ್ವಭಾವದವಳು. ಗಂಡನನ್ನು ತೀವ್ರವಾಗಿ ಆಕರ್ಷಿಸುವ ಚತುರಳು. ಅಷ್ಟೇ ಅಲ್ಲದೆ ಹಿರಿಯಾಕೆಯ ಮಗ ತುಂಬಾ ಸಾಧುಸ್ವಭಾವದವನು. ಆತನಿಗೆ ತನ್ನ ತಾಯಿ ಎಂದರೆ ಎಷ್ಟುಪ್ರೀತಿಯೋ ಅಷ್ಟೇಪ್ರೀತಿ ಚಿಕ್ಕಮ್ಮನಲ್ಲೂ.

ಈ ಗುಟ್ಟು ತಿಳಿದ ಕಿರಿಯಾಕೆ ಒಂದುದಿನ ಸವತಿಯ ಮಗನನ್ನು ಹತ್ತಿರಕ್ಕೆ ಬರಮಾಡಿಕೊಂಡು "ಮಗೂ, ನಾನೊಂದು ನೇಮವನು ಮಾಡಬೇಕೆಂದು ಸಂಕಲ್ಪಿಸಿದೇನೆ. ಆ ವ್ರತಕ್ಕೆ ದೇವತೆಗಳೆಲ್ಲರನ್ನು ಆಹ್ವಾನಿಸಬೇಕು. ಎಲ್ಲ ಜಾತಿಗಳ ಪುಷ್ಪಗಳನ್ನು ಈ ನೇಮಕ್ಕೆ ಉಪಯೋಗಿಸಬೇಕಾಗುವುದು. ಈಗ ಒಂದು ನೀಲಿರೋಜಾ ಹೂಗಳನ್ನು ಹೊರತು ಮಿಕ್ಕೆಲ್ಲ ವಿಧವಾದ ಪುಷ್ಪಗಳು ದೊರಕಿವೆ. ಆದುದರಿಂದ ವ್ರತ ನಿಲ್ಲಿಸಬೇಕಾಗಿ ಬಂತು. ಹೇಗಾದರೂ ಆ ನೀಲಿರೋಜಾ ಹೂಗಳನ್ನು ತಂದುಕೊಟ್ಟು, ನನ್ನ ವ್ರತವನ್ನು ನಡೆಸಿಕೊಡಬೇಕಾದ ಬಾಧ್ಯತೆ ನಿನ್ನದು. ಹೋಗು, ಈಗಲೇ ಹೋಗು. ಅಕ್ಕನಿಗೆ ನಾನು ಹೇಳುವೆನು" ಎಂದು ಹೇಳಿ ಅವನನ್ನು ಕಳುಹಿಸಿಬಿಟ್ಟಳು.

ಅಂದು ಎಷ್ಟು ಹೊತ್ತಾದರೂ ಮಗನು ಬರದಿರುವುದನ್ನು ಕಂಡು, ಅವನ ತಾಯಿ ಕಂಗೆಟ್ಟು ಅಲ್ಲಿ ಇಲ್ಲಿ ಹುಡುಕಲಾರಂಭಿಸಿದಳು. ಕಿರಿಯಾಕೆ ಇದನ್ನು ನೋಡಿ "ಅಕ್ಕಾ, ಮಗನಿಗಾಗಿ ನೀನೇನೂ ಭಯಪಡಬೇಕಾಗಿಲ್ಲ. 'ಸ್ನೇಹಿತರೊಂದಿಗೆ ಹೋಗಿ ವಿಚಿತ್ರವಾದ ಪುಷ್ಪಗಳನ್ನು ತರುತ್ತೇನೆ' ಎಂದು ತರಾತುರಿಯಲ್ಲಿ ಭೂಲೋಕಕ್ಕೆ ಹೋದ" ಎಂದು ನಂಬಿಕೆ ಹುಟ್ಟುವಂತೆ ಹೇಳಿದಳು. ನಿಜಕಾ

ರಣತಿಳಿಯದಿದ್ದುದರಿಂದ ಹಿರಿಯಾಕೆಗೆ ದುಗುಡಕಡಿಮೆ ಆಯಿತು.

ಇಷ್ಟರಲ್ಲಿ ಗಂಧರ್ವನ ಕೆಲಸಕ್ಕೆ ಅರ್ಹನಾದವನನ್ನು ನೇಮಿಸುವದಿನ ಬಂತು. ಆತನ ಹಿರಿಯಮಗನು ಅಲ್ಲಿ ಇಲ್ಲದಿದ್ದುದರಿಂದ ಅರ್ಹತೆಯುಳ್ಳ ತನ್ನ ಮಗನನ್ನು ಕಳುಹಿಸಿದಳು ಕಿರಿಯಾಕೆ. ಪದ್ಧತಿಪ್ರಕಾರ ಆ ಕೆಲಸ ಗಂಧರ್ವನ ಆ ಮಗನಿಗೇ ಲಭಿಸಿತು. ಆಕೆ ಆನಂದ ಗೊಂಡಳು.

ಈ ಸುಸಮಯದಲ್ಲಿ ತನ್ನ ಮಗನು ಇಲ್ಲವಲ್ಲಾ ಎಂದು ಹಿರಿಯಾಕೆಯ ಮನಸ್ಸು ಚಿಂತೆಗೊಂಡಲ್ಲಿ ಆಶ್ಚರ್ಯವಾದರೂ ಏನಿದೆ? ಇದರಲ್ಲಿ ಏನೋ ಮೋಸವಿರಬೇಕೆಂದು ಆಕೆಯ ಬುದ್ಧಿಗೆ ಹೊಳೆಯಿತು. ಕೂಡಲೇ ತನ್ನ ಮಗನ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ದಿವ್ಯದೃಷ್ಟಿಯಿಂದ ನೋಡಿದಳು.

ಆ ಹುಡುಗ ನೀಲೀರೋಜಾಗಾಗಿ ಸ್ವರ್ಗವೆಲ್ಲಾ ಸುತ್ತಿದ. ಎಷ್ಟು ಸುತ್ತಿದರೂ ಸಿಗದಿರಲು ಪಾತಾಳಕ್ಕೆ ಹೋದ. ಅಲ್ಲೂ ಸಿಕ್ಕಲಿಲ್ಲ. ಒಂದಾದಮೇಲೊಂದು ಎಲ್ಲ ಲೋಕಗಳಲ್ಲಿ ಹುಡುಕಾಡಿದ. ಎಲ್ಲೂ ಲಭಿಸಲಿಲ್ಲ ಆ ಪುಷ್ಪಗಳು. ಭೂಲೋಕದಲ್ಲಿ ಸಿಕ್ಕಬಹುದೆಂದು ಯಾರೋ ಹೇಳಿದರು.

ಭೂಲೋಕವನ್ನು ಸೇರಿ ಅಲ್ಲಿದ್ದ ಎಲ್ಲ ತೋಟ, ಉದ್ಯಾನವನಗಳಲ್ಲಿ ಹುಡುಕಿದ್ದಾಯಿತು. ನೀಲಿರೋಜಾ ಒಂದು ಬಿಟ್ಟು ಮತ್ತೆಲ್ಲ ಜಾತಿಯ ಪುಷ್ಪಗಳು ಕಾಣಿಸಿದವು. ಆದರೂ ಚಿಕ್ಕಮ್ಮನ ನೇಮಕ್ಕೆ ಭಂಗವುಂಟಾಗುವುದಲ್ಲಾ ಎಂದು ಚಿಂತಿಸಿ, ಬೇಸರಿಕೆ ವಿರಾಮಗಳೆನ್ನದೆ ಹುಡುಕುತ್ತಲೇ ಇದ್ದ.




ಹಿರಿಯಾಕೆಗೆ ಸತ್ಯಾಂಶ ತಿಳಿದು ಸವತಿಯ ಮೇಲೆ ರೊಚ್ಚಿಗೆದ್ದಳು. "ಎಲೆ, ದುರ್ಮಾರ್ಗಳೇ, ನಿನ್ನ ಕಂದನಿಗೂ ನನಗೂ ಅಗಲಿಕೆಯನ್ನುಂಟುಮಾಡಿ ನಾನಾರೀತಿಯ ಕಷ್ಟಕ್ಕೆ ಗುರಿಮಾಡಿದೆ. ನಿನಗೂ ನಿನ್ನ ಮಗನಿಗೂ ಅದೇ ರೀತಿ ಅಗಲಿಕೆಯುಂಟಾಗಿ ದುಃಖಪಡುವೆಯಂತೆ. ನನ್ನ ಮಗನನ್ನು ಯಾವ ಲೋಕಕ್ಕೆ ಕಳುಹಿಸಿದೆಯೋ ಆ ಭೂಲೋಕದೊಂದಿಗೆ ನಿನಗೆ ಸಂಬಂಧವೇರ್ಪಡುತ್ತದೆ. ಒಬ್ಬಾನೊಬ್ಬ ರಾಜ ನಿನ್ನನ್ನು ಮದುವೆಯಾಗುವನು. ನಿನ್ನ ಮಗ ಅಲ್ಲಿಯೂ ನಿನ್ನ ಪುತ್ರನಾಗಿ ಜನಿಸುವನು. ಸೃಷ್ಟಿಯಲ್ಲಿಲ್ಲದ ನೀಲೀರೋಜಾ ಹೂವಿನ ನೆಪದಿಂದ ತಾಯಿಮಕ್ಕಳಿಗೆ ಹೇಗೆ



ಅಗಲಿಕೆಯನ್ನುಂಟುಮಾಡಿದೆಯೋ ಹಾಗೇ ಕಂಡು ಕೇಳದ ನೆಪದಿಂದ ನಿಮ್ಮಿಬ್ಬರಿಗೂ ಅಗಲಿಕೆಯುಂಟಾಗುವುದು. ಈರೀತಿ ನೀನು ಕಷ್ಟಪಟ್ಟುತೀರಬೇಕು" ಎಂದು ಶಾಪವಿತ್ತು, ಮಗನನ್ನು ಹುಡುಕಿಕೊಂಡುಬರಲು ಕೂಡಲೇ ತನ್ನ ಸವತಿಯನ್ನು ಭೂಲೋಕಕ್ಕೆ ಕಳುಹಿಸಿದಳು. ಅಕ್ಕ ಕೊಟ್ಟ ಶಾಪ ಲಭಿಸುವುದೆಂದು ತಿಳಿವಿತ್ತು ಕಿರಿಯಾಕೆಗೆ. ಕೂಡಲೇ ಸವತಿಯ ಪಾದಗಳಮೇಲೆ ಬಿದ್ದು ತನ್ನನ್ನು ಕ್ಷಮಿಸಿದ ಹೊರತು ಅಲ್ಲಿಂದ ಏಳಲಾರೆನೆಂದಳು. ಕೋಮಲಸ್ವಭಾವದವಳಾದ ಹಿರಿಯಾಕೆ ಮರುಕಗೊಂಡು ಶಾಪವಿಮುಕ್ತಿಯ ಮಾರ್ಗ ಹೇಳಿ ಹೊರಟುಹೋದಳು.

ಆಗ ಅಲ್ಲಿಗೆ ಬಂದ ಗಂಧರ್ವನು ಎಲ್ಲ ವಿಷಯಗಳನ್ನೂ ಗ್ರಹಿಸಿದ. 'ನಡೆದುಹೋದುದಕ್ಕೆ ಚಿಂತಿಸಿ ಫಲವಿಲ್ಲ. ಆದರೆ ಅವಸರ ಕಂಡು ಬಂದಾಗಲೆಲ್ಲಾ ನಾನು ನಿನ್ನನ್ನು ನೋಡಿಕೊಳ್ಳುತ್ತಿರುತ್ತೇನೆ ಬಿಡು' ಎಂದು ಪರಿಪರಿ ವಿಧದಲ್ಲಿ ಕಿರಿಯಾಕೆಗೆ ಧೈರ್ಯ ಹೇಳಿದ.

ಅಷ್ಟರಲ್ಲಿ ಶಾಪಹೊಂದಿದ ಕಿರಿಯಾಕೆಗೆ ಸ್ವರ್ಗಲೋಕದ ವಿಷಯಗಳೆಲ್ಲಾ ಮರೆತು ಹೋದುವು.

ಆಕೆ ಅದೃಶ್ಯಳಾದಳು. ಆಕೆಯ ಮಗನ ವಿಷಯವೂ ಅಷ್ಟೆ. ಆತನೂ ಅದೃಶ್ಯನಾದ. ಸ್ವರ್ಗಲೋಕದಲ್ಲಿ ಅದೃಶ್ಯಳಾದ ಆ ಗಂಧರ್ವಿಣಿ ಮಾನವಳಾಗಿ ಭೂಲೋಕದಲ್ಲಿ ಒಂದು ಉದ್ಯಾನವನವನ್ನು ಸೇರಿಕೊಂಡಳು.

ಆಗ ಗಂಧರ್ವನು ತನ್ನ ಕಂಠಹಾರದಿಂದ ಹತ್ತು ಮುತ್ತುಗಳನ್ನು ತೆಗೆದು, ಆ ಹತ್ತು ಮುತ್ತುಗಳನ್ನೂ ಹತ್ತು ಪರಿಚಾರಿಕೆಯರಾಗಿ ಬದಲಾಯಿಸಿ, ಆ ಗಂಧರ್ವಿಣಿ ಸೇರಿಕೊಂಡ ಉದ್ಯಾನವನಕ್ಕೆ ಕಳುಹಿಸಿದ. ಅವರೊಂದಿಗೆ ಒಂದು ವೀಣೆಯನ್ನೂ ಕೊಟ್ಟು ಕಳುಹಿಸಿದ.

ಗಂಧರ್ವಿಣಿ ಸೇರಿಕೊಂಡ ಆ ಉದ್ಯಾನವನವು ಭಲ್ಲಾಣ ರಾಜ್ಯದ ಅಧಿಪತಿಯಾದ ಪ್ರಮೋದ ಮಹಾರಾಜನದು.

ಪ್ರಮೋದನಿಗೆ ಮದುವೆಯ ಪ್ರಸ್ತಾಪವೆತ್ತಿದರೂ ಸಹ ಕೋಪ. ಯಾರು ಹೇಳಿದರೂ ಕೇಳಲಿಲ್ಲ. ಆ ರಾಜ್ಯದ ಹಿರಿಯರೆಲ್ಲರೂ ನನ್ನ ಹತ್ತಿರ ಬಂದು ಯಾವುದಾದರೊಂದು ಉಪಾಯ ಹೇಳುವಂತೆ ಕೇಳಿದರು. ಅವರಿಗೆ ನಾನು ಕೆಲವು ಮಂತ್ರ ಫಲಗಳನ್ನು ಕೊಟ್ಟು ಕಳುಹಿಸಿದೆ. ಅದನ್ನು ತೆಗೆದುಕೊಂಡು ಹೋಗಿ

ರಾಜನಿಗೆ ತಿಳಿಯದಂತೆ ಉಪಾಹಾರ ದಲ್ಲಿ ಕೊಡಲು ಅದನ್ನು ಆತನು ಭುಜಿಸಿದನು.

ರಾಜ ಆ ಉಪಾಹಾರವನ್ನು ಸ್ವೀಕರಿಸಿದ ದಿನ ಗಂಧರ್ವಿಣಿ ಆ ಉದ್ಯಾನವನ್ನು ಸೇರಿದ ದಿನ ಒಂದೇ ಆಯಿತು.

ಅಂದು ರಾತ್ರಿ ಗಂಧರ್ವಿಣಿ ಬಾರಿಸುತ್ತಿದ್ದ ವೀಣಾವಾದವು ಪ್ರಮೋದನ ಕಿವಿಗೆಬಿತ್ತು. ಆ ಮಂಜುಳಗಾನಕೇಳಿದ ಕೂಡಲೇ ಆತನು ತಟಕ್ಕನೆ ಎದ್ದು ಉದ್ಯಾನ ವನವನ್ನು ಸೇರಿ ಕೊಂಡ. ಆಕೆಯ ಅಪೂರ್ವ ಸೌಂದರ್ಯಕ್ಕೆ ಮುಗ್ಧನಾಗಿ, ಸಂಗೀತ ಕೇಳಿ ತನ್ಮಯನಾಗಿ, ಇಷ್ಟುದಿನ ಮದುವೆಯಾಗುವುದಿಲ್ಲವೆಂದು ಹಠ ಹಿಡಿದಿದ್ದಾತ ಆ ಗಂಧರ್ವಿಣಿಯನ್ನು ವಿವಾಹವಾದ.

ಮದುವೆಯೆಲ್ಲಾ ಮುಗಿದಮೇಲೆ ಮಂತ್ರ ಫಲದ ರಹಸ್ಯ ಪ್ರಮೋದನಿಗೆ ತಿಳಿಯಿತು. ಈಗ ತಿಳಿದರೆಮಾತ್ರ ಏನು?

ಗಂಧರ್ವಿಣಿಯನ್ನು ಮನಸಾರೆ ಪ್ರೀತಿಸಿ ಪ್ರೇಮಿಸಿ ವಿವಾಹವಾದ. ಆದುದರಿಂದ ತನ್ನ ಪ್ರಜೆಗಳು ಹೂಡಿದ ಈ ಕಾರ್ಯಕ್ಕೆ ಪ್ರಮೋದನು ತನ್ನ ಸಂತೋಷವನ್ನು ವ್ಯಕ್ತಪಡಿಸಿದ" ಎಂದು ಹೇಳಿದ ಮಿತ್ರಾನಂದ.

ತರುವಾಯ ಗಂಧರ್ವಿಣಿಗೆ ಮಹೀಪಾಲನು ಜನಿಸಿದುದೂ, ರಾಜನು ಮಂದಾಕಿನಿಯನ್ನು ಮೋಹಿಸಿ ಮದುವೆಯಾದುದೂ, ಆಕೆಗೆ ಭಾನುತೇಜನು ಜನಿಸಿದುದೂ ಅಂದಿನಿಂದ ಆಕೆ ಮಹೀಪಾಲನನ್ನು ಆತನ ತಾಯಿಯ ಎದುರಿನಲ್ಲೇ ಅವಮಾನಮಾಡು



ವುದೂ ಹೇಳಿ, ಮಿತ್ರಾನಂದ ಮತ್ತೆಮುಂದು ವರಿಸಿದ :

"ಮಗನಿಗೆ ತನ್ನ ಎದುರಾಗಿಯೇ ಮಂದಾಕಿನಿ ಕೊಡುವ ಹಿಂಸೆಗಳನ್ನು ನೋಡಿ ಸಹಿಸಲಾರದಾದಳು ಗಂಧರ್ವಿಣಿ. ಒಂದು ದಿನ ಗಂಧರ್ವಿಣಿ ತನ್ನ ಸಖಿಯರೊಂದಿಗೆ ಸಮಾಲೋಚನೆಮಾಡಿದಳು.

"ನಾನು ಎದುರಾಗಿದ್ದರೆ ಮಗನಿಗೆ ಮತ್ತಷ್ಟುಯಾತನೆ ಕೊಡುವಳು ಮಂದಾಕಿನಿ. ನಾನಿಲ್ಲದಿದ್ದರೆ....? ಒಂದುವೇಳೆ ತನ್ನ ಮಗನಿಗೇ ಪಟ್ಟಕಟ್ಟಬೇಕೆಂಬ ದುರ್ಬುದ್ಧಿ ಬಂದು. ಯಾವುದಾದರೂ ತಂತ್ರ ಹೂಡಬಹುದು. ಆದರೂ ನಾನು ದೂರದಲ್ಲಿದ್ದುಕೊಂಡೇ ಆಕೆಯ ಚರ್ಯೆಗಳ ಮೇಲೆ ಗಮನ ವಿಟ್ಟಿರುತ್ತೇನೆ! ಹೀಗೆಂದು ನಿರ್ಧರಿಸಿ ಗಂಧರ್ವಿಣಿ ತನ್ನ



ಮಗನನ್ನು ಅಗಲಿ ಒಂದಾನೊಂದು ನಿರ್ಜನ ಪ್ರದೇಶ ವೆಂದುಕೊಂಡಿದ್ದ ಸ್ಥಳವನ್ನು ಸೇರಿ ಕೊಂಡಳು.

ಆಶ್ಚರ್ಯಕರವಾದ ವಿಷಯವೆಂದರೆ ಅಲ್ಲಿ ತನಗೂ ಮತ್ತೂ ತನ್ನ ಪರಿವಾರಕ್ಕೂ ಬೇಕಾದ ಸೌಕರ್ಯಗಳೆಲ್ಲವೂ ಸಿದ್ಧವಾಗಿದ್ದವು. ಈ ಸೊಗಸಾದ ಏರ್ಪಾಟುಗಳು ಅಲ್ಲಿ ಹೇಗಾಯಿತೋ ಅವರಿಗೇ ತಿಳಿಯದು. ಅಂತೂ ಅವರೆಲ್ಲಾ ಅಲ್ಲೇ ಸಂತೋಷವಾಗಿ ಕಾಲ ನೂಕುತ್ತಿದ್ದರು.

ಹೀಗೇ ಇರುವಲ್ಲಿ ತನ್ನ ಮಗನನ್ನು ಸಿಂಹಾಸನದಮೇಲೆ ಕೂಡಿಸುವ ಆಶೆಯಿಂದ ಸವತಿ ಮಂದಾಕಿನಿ ತನ್ನ ತಂದೆಯಾದ ಕಿರಾತರಾಜ ಮತ್ತು ಪುರೋಹಿತನಾದ ರಾಜಗುರುವಿನೊಂದಿಗೆ ಸಂಚುಹೂಡಿದಳು. ನಾಲ್ಕು ವರ್ಷದಿಂದಿದ್ದ ದೇಶಾರಿಷ್ಟದ ನೆಪಹೂಡಿ ಮಂದಾಕಿನಿ ಸವತಿಯ ಮಗನನ್ನು ಬಲಿಕೊಡಿಸಲು ನಿಶ್ಚಯಿಸಿದಳು.

ಇದೆಲ್ಲವನ್ನೂ ಗಮನಿಸುತ್ತಿದ್ದ ಗಂಧರ್ವನು ಒಬ್ಬ ವೃದ್ಧನರೂಪದಲ್ಲಿ ಗಂಧರ್ವಿಣಿ ನೆಲೆಸಿದ್ದ ಆ ನಿರ್ಜನ ಪ್ರದೇಶಕ್ಕೆ ಹಾರಿಬಂದು ಎಲ್ಲ ವಿಷಯವನ್ನೂ ಸೂಕ್ಷ್ಮವಾಗಿ ತಿಳಿಸಿದ. ಅಷ್ಟೇ ಅಲ್ಲ. ಆಕೆ ರಾಜಹಂಸದಂತೆ ಬದಲಾಯಿಸುವ ಶಕ್ತಿ ಕೊಟ್ಟು, ಆಕೆಯೊಂದಿಗಿದ್ದ ಹತ್ತು ಮಂದಿ ಚೇಟಿಯರನ್ನು ಮತ್ತೆ ಹತ್ತುಮುತ್ತುಗಳಂತೆ ಬದಲಾಯಿಸಿ ಕಂಠಹಾರಧರಿಸಿ ಕೊಂಡ.

ಆತರುವಾಯ—

ಸರಿಯಾದ ಸಮಯಕ್ಕೆ ಹಂಸರೂಪದಲ್ಲಿದ್ದ ಗಂಧರ್ವಿಣಿ ತನ್ನ ಮಗನನ್ನು ಹಾರಿಸಿಕೊಂಡು ಹೋಗುವುದೂ, ಮಂದಾಕಿನಿ ವಿಷತಿಂದು ಪ್ರಾಣವನ್ನುಬಿಡುವುದೂ, ಪ್ರಮೋದನು ರಾಜಗುರುವನ್ನು ತೆಗಳಿದ್ದೂ, ಆತನು ಮಂದಪಾಲನೊಂದಿಗೆ ಸೇರಿದುದೂ, ಒಳಸಂಚಿನಿಂದ ತಪ್ಪಿಸಿಕೊಂಡ ಕಿರಾತರಾಜನು ಮೊಮ್ಮಗನಾದ ಭಾನುತೇಜನನ್ನು ಸಲಹಿ ದೊಡ್ಡವನನ್ನಾಗಿ ಮಾಡಿದುದೂ, ಅವನಿಗೆ ಮದುವೆಯಾದುದೂ ಆ ಭಾನುತೇಜನಿಗೆ ಚಿತ್ರಭಾನು ಎಂಬ ಮಗ ಹುಟ್ಟಿದುದೂ, ಹೇಳಿ ಮತ್ತು ಇನ್ನೂ ಏನೋ ಹೇಳುವಷ್ಟರಲ್ಲಿ ಆ ಯುವಕನು ಅಡ್ಡಬಂದು,

"ಏನು, ಚಿತ್ರಭಾನುವೇ?' ಎಂದು ಆಶ್ಚರ್ಯಚಕಿತನಾಗಿ ಕೇಳಿದ. ಅದಕ್ಕೆ ಮುಗುಳು ನಗುತ್ತಾ ಮಿತ್ರಾನಂದ ನೆಂದ:

"ಹೌದು, ಮಗು ಹೌದು. ನೀನೇ ಆ ಚಿತ್ರಭಾನು. ಈ ಭಲ್ಲಾಣ ರಾಜ್ಯ ನಿನ್ನದು. ಇದು ಹೇಗೆಂದು ನಿನಗೆ ಆಶ್ಚರ್ಯವಾಗಬಹುದು. ನೀನು ತಲೆ ಎತ್ತದಂತೆ ದ್ರೋಹ ಬಗೆಯುತ್ತಿದ್ದಾನೆ ಆ ಚಂಡಾಲ ರಾಜಗುರು" ಎಂದು ಆ ವರೆಗೂ ನಡೆದ ವಿಷಯವನ್ನೆಲ್ಲಾ ತಿಳಿಸಿದ.

ತರುವಾಯ

"ಮಗೂ, ಚಿತ್ರಭಾನೂ, ಅಂದು ಹಂಸದ ಮೇಲೆ ಹತ್ತಿ ಕುಳಿತ ಮಹೀಪಾಲನನ್ನು ತಾಯಿ ಹಾರಿಸಿಕೊಂಡು ಹೋಗುತ್ತಿದ್ದರೆ ಅವನಿಗೆ ಎಲ್ಲಾ ಅಯೋಮಯವಾಗಿ ಕಾಣಿಸಿತು. ಆದರೆ ತಾನು ಬಲಿಪೀಠದಿಂದ ಹೊರ ಬಿದ್ದು ತಾಯಿಯ ಹತ್ತಿರ ಸೇರಿಕೊಂಡೆನಲ್ಲಾ ಎಂದು ಧೈರ್ಯವಹಿಸಿದ.

ಆ ಬಂಗಾರದ ಹಂಸ ಹಾಗೇ ಆಕಾಶ ಮಾರ್ಗದಲ್ಲಿ ಹಾರಿ, ನದಿ, ಬೆಟ್ಟಗಳನ್ನು ದಾಟಿಕೊಂಡು ಹೋಗಿ, ಒಂದಾನೊಂದು ದ್ವೀಪದಲ್ಲಿ ನಿಂತಿತು. ಅದರ ಹೆಸರು ಮಂಜುಳ ದ್ವೀಪ. ಆ ದ್ವೀಪದ ರಾಜ ತಪೋವರ್ಧನ.

ರತ್ನಕಿರೀಟಧಾರಿಯಾದ ಒಬ್ಬ ರಾಜಕುಮಾರನು ಬಂಗಾರದ ಹಂಸದ ಮೇಲೆ ಬಂದು ತಮ್ಮ ದ್ವೀಪದಲ್ಲಿ ಇಳಿದ ವಿಷಯ ಕ್ಷಣಮಾತ್ರದಲ್ಲಿ ತಿಳಿದುಬಿಟ್ಟಿತು ಆ ರಾಜನಿಗೆ. ತಿಳಿದಕೂಡಲೇ ತಪೋವರ್ಧನನು ಆಶ್ಚರ್ಯಪಟ್ಟು ಇದೊಂದು ದೇವರ ಪ್ರಸಾದವೆಂದು ಆತನು ಸಂತೋಷ ಭರಿತನಾಗಿ ಆತುರಾತುರದಿಂದ ಕಾಲು ನಡಿಗೆಯಿಂದ ಆ ಸ್ಥಳವನ್ನು ಸೇರಿದ.




ರಾಜನನ್ನು ಕಂಡ ಕೂಡಲೇ ಹಂಸರೂಪದಲ್ಲಿದ್ದ ಗಂಧರ್ವಿಣಿ ತನ್ನ ಮತ್ತು ತನ್ನ ಮಗನ ವಿಷಯವನ್ನು ಸವಿಸ್ತಾರವಾಗಿ ತಿಳಿಸಿದಳು. ಮಾನವ ಭಾಷೆಯಲ್ಲಿ ಮಾತನಾಡಿದ ಆ ಹಂಸವನ್ನು ನೋಡಿ ಚಕಿತನಾದ ತಪೋವರ್ಧನ. "ರಾಜನೇ, ಈ ಎಳೆಯನನ್ನು ನಿನಗೆ ಒಪ್ಪಿಸುತ್ತಿರುವೆನು. ಇವನನ್ನು ನೋಡಿಕೊಳ್ಳುವ ಭಾರವೆಲ್ಲವೂ ನಿನ್ನದೇ" ಎಂದು ಹೇಳಿ ಆ ಹಂಸ ಆಕಾಶಕ್ಕೆ ಹಾರಿಹೋಗಿ, ಶಾಪವಿಮುಕ್ತಿಹೊಂದಿ, ಗಂಧರ್ವಲೋಕವನ್ನು ಸೇರಿಕೊಂಡಿತು.

ದೈವವಶಾತ್ ತನಗೆ ಲಭಿಸಿದ ಹುಡುಗನನ್ನು ತಪೋವರ್ಧನನು ತುಂಬಾ ಮಮತೆಯಿಂದ ನೋಡಿಕೊಳ್ಳುತ್ತಾ ಸಮಸ್ತವಿದ್ಯೆಗಳಲ್ಲಿ ಆತನನ್ನು ಪ್ರವೀಣನನ್ನಾಗಿ ಮಾಡಿದ.

ತನ್ನ ಮಗಳನ್ನು ಆತನಿಗೇ ಕೊಟ್ಟು ವಿವಾಹ ಮಾಡಿದ.

ಆದರೆ ಮಹೀಪಾಲನು ಬಹಳದಿನ ಸಂತೋಷವಾಗಿ ಕಾಲಕಳೆಯಲು ಆಗಲಿಲ್ಲ.

ಈಗ ರತ್ನಕಿರೀಟವು ಮಂಜುಳದ್ವೀಪವನ್ನು ಸೇರಿಕೊಂಡಿತೆಂದು ನೆರೆಹೊರೆಯ ರಾಜರಿಗೆ ತಿಳಿಯಿತು.

ಅವರಲ್ಲೊಬ್ಬ ರಾಜನು ಆ ಕಿರೀಟವನ್ನು ಪಡೆಯಬೇಕೆಂಬ ಆಶೆಯಿಂದ ತಪ್ಪೋವರ್ಧನಮೇಲೆ ದಂಡೆತ್ತಿ ಹೋಗಲು ಮನಸ್ಸು ಮಾಡಿದ. ಈ ವಿಷಯ ತಿಳಿದಕೂಡಲೇ ಮಹೀಪಾಲನ ಮನಸ್ಸು ಪರಿಪರಿವಿಧದಲ್ಲಿ ಹರಿದಾಡಿತು.

"ನನ್ನನ್ನು ಗಂಡಾಂತರದಿಂದ ಪಾರುಮಾಡಲು ನನ್ಮತಾಯಿ ಇಲ್ಲಿಗೆತಂದು ಸೇರಿಸಿ, ತಪ್ಪೋವರ್ಧನ ಮಹರಾಜನಿಗೆ ಒಪ್ಪಿಸಿದ್ದಾಳೆ. ತನ್ನಮೇಲೆ ವಿಶ್ವಾಸವಿಟ್ಟು ಒಪ್ಪಿಸಿರುವಳೆಂದು ಈ ಮಹಾರಾಜನು ನನ್ನನ್ನೂ ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಾನೆ. ಆದರೂ ನನಗೆ ಮನಶ್ಶಾಂತಿಯಿಲ್ಲವಾಗಿದೆ ಕಾರಣವೇನೋ ತಿಳಿಯದು. ವೃದ್ಧನಾದ ನನ್ನತಂದೆ ಭಲ್ಲಾಣರಾಜ್ಯದಲ್ಲಿ ಹೇಗಿರುವನೋ ಹೇಗೋ? ಅದೃಶ್ಯಳಾದ ನನ್ನಮಾತೆ ಏನಾದಂತೆ? ಮಧ್ಯೆ ಈ ಕಿರೀಟಬೇರೆ ನನ್ನಕೈಯಲ್ಲೇಉಳಿದಿದೆ. ಈಗ ನೆರೆಹೊರೆಯ ರಾಜರ ದೃಷ್ಟಿ ಇದರಮೇಲೆ ಬಿದ್ದಿದೆ. ಇದನ್ನು ಪಡೆಯುವಸಲುವಾಗಿ ಯುದ್ಧಮಾಡಲೂ ಸಹ ಬರುವರೆಂದು ತಿಳಿದುಬಂದಿದೆ. ನಿಜವಾಗಿ ಯುದ್ಧನಡೆದರೆ ಜಯಾಪಜಯಗಳು ಹೇಗಿರುವುದೋ, ಎಂತಿರುವುದೋ? ಏನಾದರಾಗಲೀ, ಈ ರತ್ನಕಿರೀಟವನ್ನು ಸಾಧ್ಯವಾದಷ್ಟು ಗುಟ್ಟಾಗಿ ಭದ್ರಪಡಿಸುವುದು ನನ್ನವಿಧಿ, ಕರ್ತವ್ಯ....ಈಗಿನ ಪರಿಸ್ಥಿತಿಯಲ್ಲಿ ನಾನು ಮಾಡಬಲ್ಲದು ಇಷ್ಟೇ" ಎಂದು ನಿಶ್ಚಯಿಸಿದ.

ಈರೀತಿ ನಿರ್ಧಾರಕ್ಕೆ ಬಂದು ಮಹೀಪಾಲನು ಒಂದು ಗೊಂಡಾರಣ್ಯವನ್ನು ಪ್ರವೇಶಿಸಿದ.

ಅಲ್ಲಿ ನರನ ಕಣ್ಣಿಗೆ ಕಾಣಬರದ ಸ್ಥಳದಲ್ಲಿ, ಒಂದು ಮರದ ಕೊಂಬೆಗಳ ಸಂದಿನಲ್ಲಿ, ತುಂಬಾ ಜಾಗರೂಕತೆಯಿಂದ ರತ್ನಕಿರೀಟವನ್ನು ಬಚ್ಚಿಟ್ಟ.

ಅಷ್ಟರಲ್ಲಿ— (ಇನ್ನೂ ಇದೆ)






## 6

ಅಷ್ಟರಲ್ಲಿ ಮಹೀಪಾಲನು ಎಣಿಸಿದ್ದಂತೆಯೇ ನೆರೆಯದ್ವೀಪದರಾಜ ವಸುಪಾಲನು ಮಂಜುಳ ದ್ವೀಪದಮೇಲೆ ದಂಡೆತ್ತಿ ಬಂದ. ಉಭಯ ಪಕ್ಷಗಳಿಗೂ ಘೋರವಾದ ಯುದ್ಧ ನಡೆಯಿತು. ಆ ಯುದ್ಧದಲ್ಲಿ ತಪೋವರ್ಧನನೂ ಮಹೀಪಾಲನೂ ಮರಣ ಹೊಂದಿದರು. ಈ ವಿಷಯ ತಿಳಿದ ಕೂಡಲೇ ಮಹೀಪಾಲನ ಮಡದಿ ಪ್ರಾಣಬಿಟ್ಟಳು.

ಆ ತರುವಾಯ ವಸುಪಾಲನು ಮಂಜುಳ ದ್ವೀಪವನ್ನು ಆಕ್ರಮಿಸಿಕೊಂಡು ರತ್ನಕಿರೀಟಕ್ಕಾಗಿ ಹುಡುಕಾಡಿದ. ಆದರದು ಕಾಣಿಸಲಿಲ್ಲ. ಕೂಡಲೇ ನಾಲ್ಕುಕಡೆಗೂ ಭಟರನ್ನು ಅಟ್ಟಿದ. ಅದರಿಂದ ಉಪಯೋಗವೇನೂ ಆಗಲಿಲ್ಲ.

ಹೀಗೇ ಇರಲು ಒಂದು ದಿನ ರಾಜನು ಬೇಟೆಯಾಡಲು ಅಡವಿಗೆ ಹೋದ. ಆ ಅರಣ್ಯದಲ್ಲಿ ಒಂದು ಮರದ ಕೊಂಬೆಗಳ ಸಂದಿಯಲ್ಲಿ ಧಗಧಗನೆಂದು ಹೊಳೆಯುತ್ತಿರುವ ರತ್ನಕಿರೀಟ ಕಾಣಿಸಿತು.

ಆದರೇನು ಪ್ರಯೋಜನ? ಅದನ್ನು ಪಡೆಯುವಂತಿಲ್ಲ! ಆ ಮರವನ್ನು ಒಂದು ಭಯಂಕರವಾದ ಭೂತಸರ್ಪವು ಸುತ್ತಿಕೊಂಡಿದೆ. ಅದರ ಕಣ್ಣುಗಳು ಮಿಣುಕು ಮಿಣುಕೆಂದು ಹೊಳೆಯುತ್ತಿವೆ. ಕಾಲುಗಳಿಗೆ ಪಂಜಾಗಳೂ, ಹುಲಿಗೆ ಇರುವಂತಹ ಉಗುರುಗಳೂ ಇವೆ. ಅದರ ಆಕಾರ ಮತ್ತು ಚರ್ಮಗಳನ್ನೂ ನೋಡಿದರೆ ಮೊಸಳೆಯಂತೆ ಕಾಣುತ್ತಿದೆ. ಅದು ಬಾಯಿ ತೆಗೆದು ಬುಸುಗುಟ್ಟಿದರೆ ಅಗ್ನಿಜ್ವಾಲೆಗಳು ಹೊರಬರುತ್ತವೆ.

ವಸುಪಾಲ ಅರಮನೆಗೆ ಹಿಂತಿರುಗಿದ. ಇಂತಹ ಜಾಗದಲ್ಲಿ ರತ್ನಕಿರೀಟವಿದೆ; ಹೇಗಾದರೂ ಮಾಡಿ ಅದನ್ನು ತೆಗೆದುಕೊಂಡು ಬರ





ಬೇಕೆಂದು ಭಟರಿಗೆ ಆಜ್ಞಾಪಿಸಿದ. ಭಟರು ಹೋಗಿ ಪ್ರಯತ್ನಮಾಡಿದರು. ಆದರೆ ಅವರ ಪ್ರಯತ್ನವೆಲ್ಲಾ ನಿಷ್ಫಲವಾಯಿತು.

ಆಗ ರಾಜ ಒಂದು ಉಪಾಯ ಹೂಡಿದ. "ಆ ಭೂತ ಸರ್ಪವನ್ನು ಕೊಂದು ರತ್ನಕಿರೀಟವನ್ನು ತರುವಂತಹವನಿಗೆ ಆತನು ಕೋರಿದ ಬಹುಮಾನ ನೀಡುವೆನು" ಎಂದು ಡಂಗುರ ಸಾರಿಸಿದ. ಇದನ್ನು ಕೇಳಿದವರಿಗೆಲ್ಲಾ ಒಂದೊಂದು ರೀತಿ ಆಶೆಯುಂಟಾಯಿತು. ಆದರೆ ಪ್ರಯತ್ನಮಾಡಿದವರೆಲ್ಲಾ ಭೂತ ಸರ್ಪದ ಅಗ್ನಿಜ್ವಾಲೆಗೆ ಆಹುತಿಯಾದರು. ಕೊನೆಗೆ ರಾಜನಿಗೆ ಕಡು ಬೇಸರವಾಯಿತು. ಪ್ರಸಿದ್ಧ ಜೋತಿಷ್ಕರನ್ನು ಕರೆಸಿ "ರತ್ನಕಿರೀಟವನ್ನು ಪಡೆಯುವ ಮಾರ್ಗಯಾವುದು?" ಎಂದು ಕೇಳಿದ.

ಅವರು ಚಕ್ರಗಳನ್ನು ಹಾಕಿ, ಅಂಕೆಗಳನ್ನು ಗುಣಿಸಿ "ಮಹಾಪ್ರಭೂ, ಎಂದಿಗಾದರೂ ಆ ರತ್ನಕಿರೀಟ ಅದರ ವಂಶಸ್ಥರಿಗೆ ಲಭಿಸುವುದೇ ಹೊರತು ಅನ್ಯರು ಪ್ರಯತ್ನಪಡುವುದರಿಂದ ಲಾಭವಿಲ್ಲ" ಎಂದು ಹೇಳಿದರು.

ಯಾರಾದರೂ ಆ ವಂಶಸ್ಥರು ಬರುವರೇನೋ ಎಂದು ಚಾತಕ ಪಕ್ಷಿಯಂತೆ ಎದುರು ನೋಡುತ್ತಿದ್ದಾನೆ ವಸುಪಾಲ. ಆ ತೀರಿಕೊಂಡ ಮಹೀಪಾಲನೇ ನಿನ್ನ ದೊಡ್ಡಪ್ಪ; ಆತನೇ ತನ್ನ ಆತ್ಮಕ್ಕೆ ಶಾಂತಿಯನ್ನುಂಟುಮಾಡೆಂದು ದಿನಾ ನಿನಗೆ ಕನಸಿನಲ್ಲಿ ಕಾಣಿಸಿಕೊಂಡು ಕೇಳಿಕೊಳ್ಳುತ್ತಿದ್ದಾನೆ" ಎಂದು ಹೇಳಿದ ಮಿತ್ರಾನಂದ.

ಮತ್ತೆ ಮುಂದುವರೆಸಿ "ಕುಮಾರಾ, ಚಿತ್ರಭಾನೂ, ಆ ರತ್ನಕಿರೀಟ ಸಂಪಾದಿಸಿ ತೆಗೆದುಕೊಂಡು ಬರುವುದರಿಂದ ನಿನ್ನ ದೊಡ್ಡಪ್ಪನ ಆತ್ಮಕ್ಕೆ ಶಾಂತಿಯುಂಟಾಗುತ್ತದೆ; ಕುಟುಂಬ ಗೌರವವು ನಿಲ್ಲುತ್ತದೆ. ನಿನ್ನ ಅಜ್ಜ ಅಮರಭೂಪತಿ ನಿನಗಾಗಿ ಕಾದು ಕುಳಿತಿದ್ದಾನೆ. ಮೊದಲು ಅಲ್ಲಿಗೆ ಹೋಗಿ, ಆತನ ಆಶೀರ್ವಾದ ಪಡೆದು ಮುಂದಿನ ಕಾರ್ಯಕ್ಕೆ ಕೈಹಾಕು. ನಿನಗೆ ಶುಭವಾಗುವುದು" ಎಂದು ಹಿತನುಡಿಗಳನ್ನಾಡಿದ. ಚಿತ್ರಭಾನು ಮಗಧ ರಾಜ್ಯಕ್ಕೆ ಹೊರಟ.

* * *

ಆದಿನ ಮಂದಪಾಲನು ಪ್ರಮೋದನನ್ನು ಅಗ್ನಿ ಪ್ರಮಾದದಿಂದ ಕಾಪಾಡಿ, ತರುವಾಯ ಭಾನು




ತೇಜನ ಹೆಂಡತಿಯನ್ನು ರಕ್ಷಿಸಲು ಕಾರಾಗೃಹಕ್ಕೆ ಹೊರಟನೆಂದು ಹೇಳಿದ್ದೇವಷ್ಟೆ?

ಆ ಸಮಯದಲ್ಲಿ ಮುದಿರಾಜ ಪ್ರಮೋದನು ತನ್ನನ್ನು ಯಾರೂ ಗಮನಿಸದಂತೆ ಉಪಾಯವಾಗಿ ಅಲ್ಲಿಂದ ಜಾರಿಕೊಂಡ. ಆ ಗಲಾಟೆಯಲ್ಲಿ ಯಾರೂ ಆತನನ್ನು ಗುರುತು ಹಿಡಿಯಲಿಲ್ಲ. ಆ ರಾಜ್ಯದ ಪ್ರಜೆಗಳೇ ಗುರುತು ಹಿಡಿಯದಿರುವಾಗ ರಾಜಗುರು ನೇಮಿಸಿದ ಭಟರು ಗುರುತು ಹಚ್ಚುವುದೆಂದರೇನು?

ಕಾರಾಗೃಹದಿಂದ ಹೊರಬಿದ್ದ ಪ್ರಮೋದನು ಅನ್ನಾಹಾರಗಳನ್ನು ತ್ಯಜಿಸಿ, ಕಾಲು ಎಳೆದುಕೊಂಡು ಹೋದಕಡೆ ನಡೆದ.

ಒಂದೆಡೆ ಅಮರ ಭೂಪತಿಯ ಚಾರರು ಕಷ್ಟಪಟ್ಟು ಪ್ರಮೋದನ ಗುರುತು ಹಿಡಿದು, ತಮ್ಮರಾಜನ ಬಳಿಗೆ ಕರೆದುಕೊಂಡು ಹೋದರು.

ಬೀಗನು ಕಾಣಿಸಲು ಅಮರಭೂಪತಿ ಪರಮಾನಂದ ಭರಿತನಾದ. ಅಷ್ಟರಲ್ಲಿ ಚಿತ್ರಭಾನನೂ ಸಹ ಮಗಧ ರಾಜ್ಯವನ್ನು ಸೇರಿಕೊಂಡ. ಬಾಲಕನನ್ನು ಕಂಡಕೂಡಲೇ ಆ ವೃದ್ಧರಿಬ್ಬರೂ ಪಟ್ಟ ಆನಂದಕ್ಕೆ ಎಣೆಯೇ ಇಲ್ಲ. ಬಾಲಕನು ಕೈಗೊಂಡ ಕಾರ್ಯಗಳನ್ನು ಕೇಳಿ ಅವರು ಮೆಚ್ಚಿಕೊಂಡುರು; ಆನಂದ ಪಟ್ಟರು.

ಆದರೆ ಅವನೊಬ್ಬನೇ ಹೋಗುವುದು ಆ ವೃದ್ಧರಿಗೆ ಸರಿ ಕಂಡುಬರಲಿಲ್ಲ. ಆಗ ಅಮರ ಭೂಪತಿ ತನ್ನ ಮಗನಾದ ವಿಜಯಭೂಪತಿಯನ್ನೂ ಸಹಾಯಕ್ಕೆ ಕೊಟ್ಟು, ಇಬ್ಬರಿಗೂ ಆಶೀರ್ವಾದಮಾಡಿ, ಶುಭ ಮುಹೂರ್ತದಲ್ಲಿ ಮಂಜುಳ ದ್ವೀಪಕ್ಕೆ ಕಳುಹಿಸಿದ.

* * *

ಅಲ್ಲಿ ಕಾರಾಗೃಹದ ಹತ್ತಿರ ಏನು ನಡೆಯಿತು ಗೊತ್ತೋ? ಮೂರ್ಛೆಗೊಂಡಿದ್ದ ರಾಜಗುರು ಚೇತರಿಸಿಕೊಂಡ. ಆದರೆ ಈ ಪ್ರಮಾದ ಹೇಗೆ ಸಂಭವಿಸಿತೋ ಆತನಿಗೆ ಅರ್ಥವಾಗಲಿಲ್ಲ. ಇಷ್ಟೊಂದು ಕಷ್ಟ ಸಂಭವಿಸಿದರೂ ಕೇಡು ಬಗೆಯುವ ಬುದ್ಧಿ ಮಾತ್ರ ಬಿಡಲಿಲ್ಲ. ತನ್ನ ಹಂಚಿಕೆ ಸಫಲವಾಗಲಿಲ್ಲವಲ್ಲಾ ಎಂದು ಮುದಿರಾಜನನ್ನು ಕಾಪಾಡಿದ ಮಂದಪಾಲನಲ್ಲಿ ದ್ವೇಷ ಸಾಧಿಸತೊಡಗಿದ.

ಪ್ರಮೋದನು ಕಾಣದಿರಲು ಆತನ ಮನಸ್ಸಿನಲ್ಲಿ ಅದೊಂದುರೀತಿ ಕಳವಳವುಂಟಾಯಿತು.




ಆದರೂ ಸ್ವಲ್ಪ ದಿನಗಳಾದಮೇಲೆ "ಹೋಗಲಿ ಆ ಮುದಿಗೊಡ್ಡು ಎಲ್ಲಿ ಸತ್ತರೆ ನನಗೇನು?" ಎಂದು ಒಂದು ರೀತಿ ಉದಾಸೀನ ಬಂತು.

ಒಂದು ದಿನ ಮಂದಪಾಲನು ಅನ್ಯಮನಸ್ಕನಾಗಿದ್ದಾಗ ರಾಜಗುರು ತನ್ನ ಬಾಕುವಿನಿಂದ ಆತನನ್ನು ಕೊಂದು, ಆ ಅಪರಾಧವನ್ನು ಅಮಾಯಕನೊಬ್ಬನ ಮೇಲೆ ಹೊರಿಸಿ ಅವನನ್ನೂ ಗಲ್ಲಿಗೇರಿಸಿದ.

ರಾಜಗುರು ಏನೋ ಮೋಸಮಾಡಿ ಮುದಿ ರಾಜನನ್ನು ಕೊಂದಿರಬಹುದೆಂದು ಪ್ರಜೆಗಳಲ್ಲಿ ಊಹಾಪೋಹವೆದ್ದಿತು. ಅಷ್ಟೇ ಅಲ್ಲ. ಕಪ್ಪಕಾಣಿಕೆಗಳಿಗಾಗಿ ರಾಜಗುರು ಕೊಡುತ್ತಿದ್ದ ಕಿರುಕುಳವನ್ನು ತಡೆಯಲಾರದೆ ಅನೇಕ ಸಾಮಂತ ರಾಜರು ಮತ್ತೆ ಅಮರ ಭೂಪತಿಯನ್ನು ಆಶ್ರಯಿಸಿದರು. ಆಗ ಅಮರ ಭೂಪತಿಗೆ ಸಲಹೆಗಾರನೆಂದರೆ ವೃದ್ಧರಾಜನಾದ ಪ್ರಮೋದ.

ಪ್ರಮೋದ ತುಂಬಾ ದೀರ್ಘಾಲೋಚನೆ ಮಾಡಿ ಈಗ ಭಲ್ಲಾಣ ಕೋಟೆಗೆ ಮುತ್ತಿಗೆ ಹಾಕುವುದು ಉಚಿತವೆಂದ.

ಸಾಮಂತ ರಾಜರೆಲ್ಲಾ ಒಟ್ಟುಗೂಡಿ ಒಂದು ರಾತ್ರಿ ಭಲ್ಲಾಣ ಕೋಟೆಯನ್ನು ಮುತ್ತಿದರು. ಬಲವೆಲ್ಲಾ ಉಡುಗಿಹೋಗಿದ್ದ ರಾಜಗುರು ಬೆದರಿದ. ಸುರಂಗ ಮಾರ್ಗದಿಂದ ತಪ್ಪಿಸಿಕೊಂಡು ಹೋಗಲು ನೋಡಿದ.

ಎರಡು ಹೆಜ್ಜೆ ಮುಂದೆ ಇಟ್ಟನೋ ಇಲ್ಲವೋ ಅಮರ ಭೂಪತಿಯ ಭಟರು ಅವನನ್ನು ಹಿಡಿದುಬಿಟ್ಟರು. ರಾಜಗುರುವಿನ ಮುಖ ಬಿಳಿಚಿಕೊಂಡಿತು. ರಹಸ್ಯದ್ವಾರಗಳಲ್ಲೆಲ್ಲಾ ಪ್ರಮೋದನು ಕಾವಲಿರಿಸಿದ್ದ ವಿಷಯ ಅವನಿಗೆ ಹೇಗೆ ತಿಳಿಯಬೇಕು? ಕೋಟೆ ಪ್ರಮೋದನ ವಶವಾಯಿತು. ಸಾಮಂತ ರಾಜರು ಸಂತೋಷಪಟ್ಟರು. ಪ್ರಜೆಗಳು ಪರಮಾನಂದ ಭರಿತರಾದರು. ರಾಜ್ಯ ಮತ್ತೊಂದುಸಾರಿ ಹಿಂದಿನ ಸ್ಥಿತಿಗೆ ಬಂತು. ಎಲ್ಲರೂ ಬಾಲಕರಿಗಾಗಿ ಎದುರು ನೋಡುತ್ತಿದ್ದರು.

ಚಿತ್ರಭಾನೂ, ವಿಜಯಭೂಪತಿ ಅನೇಕ ಕಷ್ಟಗಳನ್ನು ಅನುಭವಿಸಿ ಕೊನೆಗೆ ಮಂಜುಳ ದ್ವೀಪವನ್ನು ಸೇರಿಕೊಂಡರು. ವಸುಪಾಲ ಅವರಿಬ್ಬರನ್ನೂ ಬಹುಬಗೆಯಾಗಿ ಆದರಿಸಿ, ಗೌರವಿಸಿದ. "ನಿಮಗಾಗಿಯೇ ಎದುರು ನೋಡುತ್ತಿರುವೆನು" ಎಂದ. "ಈ ರತ್ನಕಿರೀಟ

ಮತ್ತೆ ಅದರ ಒಡೆಯರ ವಂಶ ಸೇರುವುದು ತುಂಬಾ ಸಂತೋಷಕರವಾದವಿಷಯ" ಎಂದು ಹೇಳಿದ.

ಎಲ್ಲರೂ ಅರಣ್ಯವನ್ನು ಸೇರಿದರು. ಮರವನ್ನು ಸುತ್ತಿಕೊಂಡಿದ್ದ ಭೂತ ಸರ್ಪವನ್ನು ಕುರಿತು ವಸುಪಾಲನು ಚಿತ್ರಭಾನುವಿಗೆ ಎಚ್ಚರಿಕೆಕೊಟ್ಟ.

ಕಿರೀಟ ಹೇಗಾದರೂ ಮಾಡಿತರಬೇಕೆಂಬುದೊಂದೇ ಚಿತ್ರಭಾನನ ಆಶಯ. ಏನಾದರೂ ಆಗಲೀ ಎಂದು ಸಾಹಸ ಮಾಡಿ ಮರದ ಹತ್ತಿರ ಹೋದ.

ಭಯಾಶ್ಚರ್ಯಗಳಿಂದ ಎಲ್ಲರೂ ಆತನನ್ನು ನೋಡುತ್ತಿದ್ದರು. ಸರ್‍ರನೆ ಒರೆಯಿಂದ ಖಡ್ಗವನ್ನು ತೆಗೆದ. ಸರ್ಪದಮೇಲೊಂದು ಏಟು ಹಾಕಲು ಹವಣಿಸಿದ. ಅಷ್ಟರಲ್ಲಿ ಆಶ್ಚರ್ಯಕರವಾದ ಕೆಲಸವೊಂದಾಯಿತು. ಆಗ ಖಡ್ಗ ತಾಕಿತೋ ಇಲ್ಲವೋ ಅನ್ನುವಷ್ಟರಲ್ಲಿ ಆ ಸರ್ಪ ಒಬ್ಬ ಗಂಧರ್ವನ ರೂಪ ತಾಳಿತು.

ಆಗ ಗಂಧರ್ವನು ಮರದ ಮೇಲಿದ್ದ ರತ್ನ ಕಿರೀಟವನ್ನು ತಂದು ಚಿತ್ರಭಾನುವಿನ ಕೈಗೆ ಕೊಡುತ್ತಾ,

"ಅಪ್ಪಾ, ಮಗೂ, ನನಗೆ ಶಾಪವಿಮುಕ್ತಿ ಮಾಡಿದೆ. ಇಷ್ಟುದಿನ ಇದಕ್ಕೆಂತಲೇ ನಾನು ಎಲ್ಲರ ಕನಸಿನಲ್ಲಿಯೂ ಕಾಣಿಸಿಕೊಂಡು ನನ್ನ ಆತ್ಮಕ್ಕೆಶಾಂತಿಯನ್ನುಂಟು ಮಾಡುವಂತೆ ಕೇಳಿಕೊಳ್ಳುತ್ತಿದ್ದೆ. ಈ ಕಾರ್ಯ ಯಾರೂ ನೆರವೇರಿಸದಾದರು. ಎಂದಿಗಾದರೂ ನೀನೇ



ಈ ಕಾರ್ಯಕ್ಕೆ ತಕ್ಕವನು ಎಂದೆಣಿಸಿದ್ದೆ. ಯುದ್ಧದಲ್ಲಿ ಪ್ರಾಣಬಿಟ್ಟರೂ ಈ ಭೂತ ಸರ್ಪದ ಆಕಾರ ತಾಳಬೇಕಾಯಿತು. ವಂಶಮರ್ಯಾದೆಯನ್ನು ನಿಲ್ಲಿಸಿ, ನನ್ನ ಆತ್ಮಕ್ಕೆ ಶಾಂತಿಯನ್ನು ಉಂಟು ಮಾಡಿದ ನಿನಗೆ ಈ ರತ್ನಕಿರೀಟ ಒಪ್ಪಿಸಿರುವೆನು. ಇನ್ನು ನನಗೆ ಯಾವ ಚಿಂತೆಯೂ ಇಲ್ಲ." ಎಂದು ಹೇಳಿ ಗಂಧರ್ವ ರೂಪದಲ್ಲಿದ್ದ ಮಹೀಪಾಲ ಅದೃಶ್ಯನಾದ.

ಇದೆಲ್ಲವನ್ನೂ ನೋಡುತ್ತಿದ್ದ ವಸುಪಾಲನಿಗೆ ಆಶ್ಚರ್ಯವಾಯಿತು. ಅಷ್ಟೇ ಅಲ್ಲ, ಹೇಗಾದರೂ ಮಾಡಿ ಆ ಕಿರೀಟವನ್ನು ಹಾರಿಸಿಬಿಡಬೇಕೆಂಬ ಮನಸ್ಸಾಯಿತು. ತನ್ನ ಉದ್ದೇಶವನ್ನು ಹೆಂಡತಿಗೆ ಹೇಳಿದ. ಗಂಡ ಹೆಂಡಿರು ಆಡುತ್ತಿದ್ದ ಮಾತುಗಳು ಆತನ ಮಗಳಾದ ಜಯಂತಿಗೆ ಕೇಳಿಸಿತು.




ಹೇಗಾದರೂ ಮಾಡಿ ಬಾಲಕರಿಬ್ಬರನ್ನೂ ಕಾಪಾಡಬೇಕೆಂದು ನಿಶ್ಚಯಿಸಿದಳು ಜಯಂತಿ. ತನ್ನ ಸಖಿಯರ ಸಹಾಯದಿಂದ ನಡುರಾತ್ರಿಯ ವೇಳೆಗೆ ಮೂರು ಕುದುರೆಗಳನ್ನು ಸಿದ್ಧಮಾಡಿಸಿದಳು. ಕತ್ತಲಾದಮೇಲೆ ಚಿತ್ರಭಾನನೂ ವಿಜಯ ಭೂಪತಿಯೂ ಇದ್ದ ಕೊಠಡಿಗೆ ಹೋಗಿ, ಕೂಡಲೇ ಹೊರಗೆ ಬರುವಂತೆ ಮನವಿಮಾಡಿಕೊಂಡಳು. ಅವರು ಸಂಶಯ ಗ್ರಸ್ತರಾಗಿರುವುದನ್ನು ಕಂಡು ಜಯಂತಿ ಹೀಗೆಂದಳು :

"ನನ್ನ ಮಾತು ಕೇಳಿ ನನ್ನ ತಂದೆ ನಿಮ್ಮನ್ನು ಕೊಲ್ಲಲು ಬರುತ್ತಿದ್ದಾನೆ. ನಮ್ಮ ತಾಯಿಯೊಂದಿಗೆ ಹಾಗೆ ಹೇಳುವುದನ್ನು ನಾನು ಕೇಳಿದೆ. ರತ್ನಕಿರೀಟಕ್ಕಾಗಿ ಈ ದ್ವೀಪದಮೇಲೆ ದಂಡೆತ್ತಿಬಂದ ನನ್ನ ತಂದೆ, ಅದನ್ನು ನೀವು ತೆಗೆದುಕೊಂಡು ಹೋಗುವುದನ್ನು ನೋಡುತ್ತ ಸುಮ್ಮನಿರುವನೇ? ನೀವಿಬ್ಬರೂ ಈ ದ್ವೀಪದಲ್ಲಿ ಕಾಲಿಡುವಾಗಲೇ ನಾನು ಅಂತಃಪುರದಿಂದ ನಿಮ್ಮನ್ನು ನೋಡಿದೆ. ನಿಮಗೆ ಯಾವ ರೀತಿಯ ಅಪಾಯವೂ ಇಲ್ಲದಂತೆ ಮಾಡಬೇಕೆಂದು ಎಲ್ಲ ದೇವರಲ್ಲೂ ಹರಕೆ ಹೊತ್ತೆ. ನನ್ನ ತಂದೆ ತುಂಬಾ ದುರಾಶೆಯುಳ್ಳವನು. ಹಾಗಿಲ್ಲದ ಪಕ್ಷಕ್ಕೆ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಒಬ್ಬಳೇ ಮಗಳನ್ನು ಮುದುಕನೊಬ್ಬನಿಗೆ ಕೊಟ್ಟು ವಿವಾಹ ಮಾಡಲು ನಿರ್ಧರಿಸುವನೆ? ನನಗೆ ತಾಯಿ ಇದ್ದೂ ಒಂದೇ, ಇಲ್ಲದಿದ್ದರೂ ಒಂದೇ. ಆಕೆಗೆ ನಮ್ಮ ತಂದೆಗಿಂತಲೂ ಹಣದ ಮೇಲೆ ಮೋಹ ಹೆಚ್ಚು. ಅದಕ್ಕಾಗಿ ಏನಾದರೂ ಮಾಡುವಳು. ನನ್ನನ್ನು ಈ ಆಪತ್ತಿನಿಂದ ಬಿಡಿಸಿ ನಿಮ್ಮೊಂದಿಗೆ ಕರೆದುಕೊಂಡು ಹೋಗಿ. ಮೂವರೂ ತಪ್ಪಿಸಿಕೊಂಡು ಓಡಿಹೋಗೋಣ. ಎಲ್ಲವನ್ನೂ ಅಣಿ ಮಾಡಿಸಿದ್ದೇನೆ"

ಅಂದು ರಾತ್ರಿಯೇ ವಸುಪಾಲ ಆ ಹುಡುಗರನ್ನು ಕೊಲ್ಲಲು ಹೊರಟ.

ಅಷ್ಟರಲ್ಲಿ ಒಬ್ಬಸೇವಕನು ಏದುತ್ತಾ ಬಂದು "ಪ್ರಭೂ, ರಾಜಕುಮಾರಿ ಅಂತಃಪುರದಲ್ಲಿ ಕಾಣಿಸುತ್ತಿಲ್ಲ. ಈ ವಿಷಯವನ್ನು ಮಹಾಸ್ವಾಮಿಯವರಿಗೆ ತಿಳಿಸೋಣವೆಂದು ಹೋದರೆ ದೇವರ ದರ್ಶನವಾಗಲಿಲ್ಲ. ಆದುದರಿಂದ ಹುಡಕುತ್ತಾ ಇಲ್ಲಿಗೆ ಬಂದೆ" ಎಂದ. ಈ ಮಾತುಗಳನ್ನು ಕೇಳುತ್ತಲೇ ವಸುಪಾಲ




ತಾನು ಬಂದ ಕಾರ್ಯವನ್ನು ಮರೆತು ಅಂತ ಪುರದ ಕಡೆ ಧಾವಿಸಿದ.

ಅದೇ ಸಮಯಕ್ಕೆ ಆ ಕೊಠಡಿಯಿಂದ ಮೂವರು ರತ್ನಕಿರೀಟದೊಂದಿಗೆ ಹೊರಬಿದ್ದು ಸಿದ್ಧವಾಗಿದ್ದ ಅಶ್ವಗಳ ಮೇಲೇರಿದರು. ಮಹಡಿಯ ಮೇಲಿದ್ದ ರಾಜ ಇವರನ್ನು ನೋಡಿಬಿಟ್ಟ.

ಇವರ ಸಂಚನ್ನು ಕೂಡಲೇ ತಿಳಿದುಕೊಂಡು ತನ್ನ ನಡುವಿನಲ್ಲಿದ್ದ ಬಾಕು ತೆಗೆದು ಅವರಕಡೆ ಎಸೆದ. ದುರದೃಷ್ಟವಶಾತ್ ಅದು ಚಿತ್ರಭಾನುವಿನ ಬೆನ್ನಿಗೆ ನಾಟಿತು. ಚಿತ್ರಭಾನು ಅದನ್ನು ಕಿತ್ತು ಬಿಸುಟ.

ಅರಮನೆಯಿಂದ ವಸುಪಾಲ "ಹಿಡಿಯಿರಿ, ಹಿಡಿಯಿರಿ" ಎಂದು ಕೂಗುತ್ತಿದ್ದ. ಕೂಡಲೇ ಸವಾರರು ಬೆನ್ನಟ್ಟಿದರು. ಆದರೆ ಅವರನ್ನು ಹಿಡಿಯಲು ಸಾಧ್ಯವಾಗಲಿಲ್ಲ.

ಅವರು ಮೂವರೂ ತೀರವನ್ನು ಸೇರಿ, ಹಡಗಿಗೆ ಲಂಗರು ಬಿಚ್ಚಿ ಕ್ಷಣಮಾತ್ರದಲ್ಲಿ ಮುಂದಕ್ಕೆ ಪ್ರಯಾಣ ಮಾಡಿದರು. ಹಿಂಬಾಲಿಸಿಕೊಂಡು ಬಂದ ನೌಕರರು ಮತ್ತೇನೂ ಮಾಡಲಾರದೆ ಅವರು ಹೋಗುತ್ತಿರುವುದನ್ನು ಬೆಕ್ಕಸಬೆರಗಾಗಿ ನೋಡುತ್ತಾ ನಿಂತಿದ್ದರು.

ಹಡಗನ್ನೇರಿದ ಕೂಡಲೇ ಜಯಂತಿ, ವಿಜಯಭೂಪತಿ ಸೇರಿ ಚಿತ್ರಭಾನುವಿಗೆ ಸಮಸ್ತ ಉಪಚಾರಗಳನ್ನೂ ಮಾಡಿದರು. ಏನು ಮಾಡಿದರೇನು? ಆ ಬಾಕು ವಿಷಪೂರಿತವಾದುದರಿಂದ ಅದರ ಕೆಲಸ ಅದು ಮಾಡುತ್ತಲೇ ಇತ್ತು. ಆದರೂ ಚಿತ್ರಭಾನು ಎದೆಗುಂದಲಿಲ್ಲ. ತನ್ನ ಬಾಧೆಯನ್ನು ಹೊರಗೆ ತೋರಗೊಡಲಿಲ್ಲ.

ಅಲ್ಲಿ ಭಲ್ಲಾಣ ರಾಜ್ಯದಲ್ಲಿ ಏನು ನಡೆಯಿತು ಗೊತ್ತೇ? ಹಡಗು ಬಂದಿತೆಂದ ಕೂಡಲೇ ಎಲ್ಲ ಜನರೂ ಆನಂದದಿಂದ ಉಬ್ಬಿ ಉದ್ಗಾರವೆಳೆದರು. ಚಿತ್ರಭಾನು ರತ್ನಕಿರೀಟವನ್ನು ತಾತನ ಕೈಗೆಕೊಟ್ಟ. ಪ್ರಮೋದನ ಆನಂದ ಹೇಳತೀರದು. ಅಮರ ಭೂಪತಿಯೊಂದಿಗೆ ಮೊಮ್ಮಗನ ಪಟ್ಟಾಭಿಷೇಕಕ್ಕೆ ತಕ್ಕ ಏರ್ಪಾಟು ಮಾಡುವಂತೆ ಹೇಳಿದ.

ಆದರೆ ಅಷ್ಟರಲ್ಲಿ ಚಿತ್ರಭಾನನ ಸ್ಥಿತಿ ಉತ್ಕಟವಾಯಿತು. ಕೂಡಲೇ ರಾಜನು ಮಿತ್ರಾನಂದನ ಹತ್ತಿರಕ್ಕೆ ಜನರನ್ನು ಕಳುಹಿಸಿದ. ಆಗಾಗಲೇ ಯಜ್ಞಯಾಗಾದಿಗಳನ್ನು ಮುಗಿಸಿಕೊಂಡು ಆತನೆಲ್ಲೋ ಹೊರಟು ಹೋಗಿದ್ದ.

ಚಿತ್ರಭಾನನ ಪಟ್ಟಾಭಿಷೇಕ ಮುಹೂರ್ತವು ಸಮೀಪಿಸಿತು.

ಆದರೆ ಆತನು ಹಾಸಿಗೆಯ ಮೇಲೆಯೇ ಮಲಗಿದ್ದ. ಸುತ್ತಲೂ ಆತನ ಬಂಧು ಬಳಗ ನೆರೆದಿದ್ದರು. ಚಿತ್ರಭಾನು ಎಲ್ಲರ ಕಡೆಗೂ ಒಂದುಸಾರಿ ನೋಡಿದ. ಜಯಂತಿ ಮತ್ತು ವಿಜಯಭೂಪತಿಯ ಕೈಗಳನ್ನು ಜೊತೆಯಾಗಿ ಹಿಡಿದು, ಗಳಗಳನೆ ಕಂಬನಿ ಮಿಡಿಯುತ್ತಾ ಕಣ್ಣುಮುಚ್ಚಿದ. ಭಲ್ಲಾಣರಾಜ್ಯ ದುಃಖ ಸಾಗರದಲ್ಲಿ ಮುಳುಗಿತು.

ವೃದ್ಧರಾಜನಾದ ಪ್ರಮೋದನಿಗೆ ಹೊಟ್ಟೆಯಲ್ಲಿ ಬೆಂಕಿಯಿಟ್ಟಂತಾಯಿತು. ಆತನ ಕಣ್ಣುಗಳಿಂದ ಕಂಬನಿ ಕೋಡಿ ಹರಿಯಿತು. ಮರುಕ್ಷಣದಲ್ಲಿ ಕಣ್ಣುಗಳು ಕೆಂಡದಂತೆ ಕೆಂಪಾದವು. ರತ್ನಕಿರೀಟದಮೇಲೆ ಎಲ್ಲಿಲ್ಲದ ಕೋಪ ಜನಿಸಿತು. ರತ್ನಕಿರೀಟವಿದ್ದೆಡೆಗೆ ಗಬಗಬನೆ ಹೋಗಿ ಅದನ್ನು ತೆಗೆದು ನೆಲದ ಮೇಲೆ ಅಪ್ಪಳಿಸಿದ. ಅದು ಚೂರು ಚೂರಾಯಿತು. ರತ್ನಗಳೆಲ್ಲಾ ಚೂರುಚೂರಾಗಿ ಮಿಣುಕು ಹುಳುಗಳಂತೆ ಮೆರೆಯುತ್ತಾ ಚಲ್ಲಾಪಿಲ್ಲಿಯಾಗಿ ಚದುರಿದವು. "ನಮ್ಮ ವಂಶವನ್ನು ನಿರ್ಮೂಲ ಮಾಡಿದ ಈ ರತ್ನಕಿರೀಟವಿದ್ದರೆಷ್ಟು, ಹೋದರೆಷ್ಟು?.... ಅಯ್ಯೋ, ನನ್ನ ಕಂದ ಚಿತ್ರಭಾನು ಸಿಂಹಾಸನಾರೂಢನಾಗಿ ಈ ಕಿರೀಟವನ್ನು ಧರಿಸಿರುವುದನ್ನು ನೋಡುವ ಭಾಗ್ಯ ನನಗಿಲ್ಲದಾಯಿತಲ್ಲಾ! ಅವನ ಪಟ್ಟಾಭಿಷೇಕ ಒಂದು ಕನಸು ಕಂಡಂತಾಯಿತಲ್ಲಾ, ನನ್ನ ಆಶೆಗಳೆಲ್ಲವೂ ಮಣ್ಣುಪಾಲಾದವಲ್ಲಾ...ಇನ್ನೂ ನಾನು ಬದುಕಿದ್ದು ಏನುಫಲ?" ಎಂದು ಪರಿಪರಿವಿಧದಲ್ಲಿ ಪ್ರಲಾಪಿಸಿದನು.

ಮರುಕ್ಷಣವೇ ಉಗ್ರನಾದ. ಮೈಯೆಲ್ಲಾ ಕೋಪದಿಂದ ತರತರನೆ ನಡುಗಿತು. ಕಾಲುಗಳು ಗಡಗಡ ನಡುಗಿದುವು. ತಾಳಲಾರದಷ್ಟು ಆವೇಶ ಬಂದು, ಮೈಮೇಲಿದ್ದ ಬಟ್ಟೆಗಳನ್ನು ಹರಿದುಕೊಂಡ. ಹುಚ್ಚನಂತೆ ಅತ್ತಿತ್ತ ಅಡಿಯಿಡುತ್ತಾ "ಎಲ್ಲಿ, ನನ್ನನ್ನೂ ನನ್ನ ಕುಟುಂಬವನ್ನೂ ನಾಶಮಾಡಿದ ಆ ಚಂಡಾಲ ರಾಜಗುರುವೆಲ್ಲಿ? ಆ ದುರುಳನೆಲ್ಲಿ? ಎಲ್ಲಿ ಆ ರಾಜಗುರು?" ಎಂದು ಗಟ್ಟಿಯಾಗಿ ಅರಚಿದ.

ರಾಜನ ಕಾಲುಗಳು ರತ್ನದ ಚೂರುಗಳ ಮೇಲೆ ಬಿದ್ದ ಕೂಡಲೇ ಸರ್ರನೆ ಜಾರಿದ. ಮತ್ತೆ ಏಳಲಿಲ್ಲ!!






ಇಷ್ಟರಲ್ಲಿ ಎಲ್ಲಿಂದಲೋ ಒಂದು ಬಾಣ ಜುರ್ರೆಂದು ಕಾಲಪಾಶದಂತೆ ಬಂದು ಮುದಿಗಂಗು ಎದೆಯಲ್ಲಿ ಚೊಚ್ಚಿಕೊಂಡಿತು! ಆ ಏಟಿಗೆ ಕುಸಿದುಬಿದ್ದ ಆತ. ಮೃದುಹೃದಯಿ ವಿಜಯವರ್ಮ ಗಂಗೂ ಎದೆಗೆ ಚುಚ್ಚಿಕೊಂಡಿದ್ದ ಬಾಣವನ್ನು ಎಳೆದುಬಿಟ್ಟ. ಪಾಪ, ಗಂಗೂ ಒಂದುಸಾರಿ 'ಅಬ್ಬಾ' ಎಂದು ಚೀರಿ ಪ್ರಾಣಬಿಟ್ಟ. ಕೈಯಲ್ಲಿದ್ದ ಬಾಣವನ್ನು ವಿಜಯವರ್ಮನು ಪರೀಕ್ಷಿಸಿ ನೋಡಿ "ಈ ಬಾಣ ತುಂಬಾ ವಿಚಿತ್ರವಾಗಿದೆ" ಎಂದ. ಆ ಬಾಣದಮೇಲೆ "ಗಂಗೂಗೆ ಶಬ್ದವೇಧಿಯ ಕಾಣಿಕೆ" ಎಂದು ಸಣ್ಣ ಅಕ್ಷರಗಳಲ್ಲಿ ಕೆತ್ತಿದೆ. ಕೆಲವು ನೂರುವರ್ಷಗಳ ಹಿಂದಿನದು ಈ ಶಬ್ದವೇಧಿಯನ್ನು ಕುರಿತ ಈ ಕಥೆ:

---

ಇಂದು ಮಧ್ಯಪ್ರಾಂತವೆಂದು ಕರೆಯಲ್ಪಡುತ್ತಿರುವ ವಿಂಧ್ಯಾಚಲಕ್ಕೆ ಹೊಂದಿಕೊಂಡಿರುವ ನಾಡು ಅಂದು ಚಿಕ್ಕಚಿಕ್ಕ ರಾಜ್ಯಗಳಾಗಿ ವಿಭಜಿಸಲ್ಪಟ್ಟದ್ದುವು. ಆಗಾಗಲೇ ಹಿಂದೂ, ಬೌದ್ಧ ಸಾಮ್ರಾಜ್ಯಗಳು ಅಳಿಸಿಹೋಗಿದ್ದವು. ಆದರೆ ಇನ್ನೂ ಮೊಗಲರು ಅಡಿಯಿಟ್ಟಿರಲಿಲ್ಲ. ತುಂಬಾ ತ್ರಾಸದಾಯಕವಾದ ದಿನಗಳವು. ಅಂಕೆಯಲ್ಲಿಡುವವರು ಇಲ್ಲದೆ ಸಣ್ಣಪುಟ್ಟ ಸಾಮಂತರು ತಮ್ಮತಮ್ಮಲ್ಲೇ ಕಾದಾಡುತ್ತಿದ್ದರು. ದೇಶವು ಅರಾಜಕವಾಗಿ, ಅಲ್ಲಕಲ್ಲೋಲವಾಗಿತ್ತು. ಹೋರಿಗಳ ಹೊಡೆದಾಟದಲ್ಲಿ ಕರುಗಳು ನಲುಗಿ ಸಾಯುವಂತೆ ಈ ಪ್ರಭುಗಳ ಕಾದಾಟದಲ್ಲಿ ಪ್ರಜೆಗಳು ನಲುಗಿ ಸಾಯುತ್ತಿದ್ದರು. ಸರಿ, ಇನ್ನು ಜಮಿನುದಾರರ, ಜಹಗೀರುದಾರರ ವಿಷಯ ಹೇಳುವುದೇನಿದೆ? ಪ್ರತಿಯೊಬ್ಬರೂ ಒಂದೊಂದು ಸಣ್ಣ ಗುಂಪನ್ನು ಕಟ್ಟಿಕೊಂಡು ಅವುಗಳ ಸಹಾಯದಿಂದ ಜನರನ್ನು ಸುಲಿಗೆ ಮಾಡುತ್ತಿದ್ದರು. ಇದರಿಂದ ಆ ದಿನಗಳಲ್ಲಿ ಯಾವ ಆಶ್ರಯವೂ ಇಲ್ಲದ ಬಡವರಿಗೆ ರಕ್ಷಣೆಯೇ ಇರಲಿಲ್ಲ.




ಅಂದು ವಿಂಧ್ಯಪ್ರದೇಶದ ಸರಿಹದ್ದಿನಲ್ಲಿ ದೊಡ್ಡ ರಾಜ್ಯಗಳೆಂದು ಹೇಳಬಹುದಾದುದು ಎರಡೇ ಇದ್ದವು. ಒಂದು ಬಿಸಲ್‌ಪುರ ರಾಜ್ಯ, ಎರಡನೇಯದು ಕೊಸಲ್‌ಪುರ ರಾಜ್ಯ. ಆ ರಾಜ್ಯಗಳ ಅಧಿಪತಿಗಳಿಬ್ಬರೂ ಸೂರ್ಯ ವಂಶೀಯರು. ಅವರ ತಾಂತಂದಿರು ಅಣ್ಣ ತಮ್ಮಂದಿರ ಪುತ್ರರು. ಯಾವುದೋ ಗೃಹ ಕಲಹ ಬಂದು ಅದುವರೆವಿಗೂ ಒಂದಾಗಿದ್ದ ಬಿಸಲ್‌ಪುರ ರಾಜ್ಯವನ್ನು ಇಬ್ಬರೂ ಸರಿಸಮನಾಗಿ ಹಂಚಿಕೊಂಡರು. ಈ ರೀತಿಯಾಗಿ ಕೊಸಲ್‌ಪುರರಾಜ್ಯ ಜನಿಸಿತು.

ಅಂದಿನಿಂದ ಈ ಎರಡು ರಾಜ್ಯಗಳ ನಡುವೆ ಹಸರು ಹುಲ್ಲು ಹಾಕಿದರೆ ಧಗ್ಗನೆ ಉರಿಯುತಿತ್ತು. ದಾಯಾದಿಗಳ ಜಗಳ ಅರಿಯದವರ್ಯಾರು? ನಮ್ಮ ಕಥೆ ಪ್ರಾರಂಭದಲ್ಲಿ ಒಂದು ದಿನ ಸಾಯಂಕಾಲ ಕೊಸಲ್‌ಪುರದ ಸರಹದ್ದಿನಲ್ಲಿರುವ ಗಿರಿಕೋಟೆಯಲ್ಲಿ ರಣಭೇರಿ ಮೊಳಗಿತು. ಗಿರಿಕೋಟೆ ಕೊಸಲ್‌ಪುರದ್ದೇ ಆದರೂ ಬಿಸಲ್‌ಪುರದ ಸರಹದ್ದನ್ನು ಅಂಟಿಕೊಂಡಿದೆ. ಆ ಕೋಟೆಯ ಯಜಮಾನಿ ಭೀಮವರ್ಮ. ಆತನಾಗ ಕೋಟೆಯಲ್ಲಿ ಇರಲಿಲ್ಲ. ಸೈನಿಕರೊಂದಿಗೆ ರಾಮನಗರಕ್ಕೆ ಹೋಗಿದ್ದ. ಈಗ ಆತನ ಪುರೋಹಿತನೂ, ಅಂತರಂಗಿಕ ಮಿತ್ರನೂ ಆದ ಸೋಮಶರ್ಮನೇ ದುರ್ಗಾಧಿಪತಿ.

ರಣಭೇರಿ ಕೇಳಿದ ಕೂಡಲೇ, ರಾಮನಗರಕ್ಕೆ ಹೋದವರು ಹೊರತು ಕೋಟೆಯಲ್ಲಿ ಉಳಿದಿದ್ದ ಪುರುಷರೆಲ್ಲಾ ಕೆಲಸಬೊಗಸೆಗಳನ್ನು ಅಲ್ಲಲ್ಲೇ ಬಿಟ್ಟು ಮೊಗಸಾಲೆಗೆ ಬಂದು ಸೇರಿದರು. ಅಲ್ಲಿ ೧೭-೧೮ ವರ್ಷ ವಯಸ್ಸಿನ ರಾಹುತನೊಬ್ಬನು ಸಮಸ್ತ ವಿಧವಾದ ಆಯುಧಗಳನ್ನು ಧರಿಸಿ ನಿಂತಿದ್ದಾನೆ. ಆತನೇ ಭೀಮವರ್ಮನು ಸಲಹುತ್ತಿದ್ದ ಯುವಕ. ಆತನ ಹೆಸರು ವಿಜಯವರ್ಮ.

ಹೀಗೆ ನೆರದಿದ್ದ ಪ್ರಜೆಗಳು 'ಏನು ವಿಷಯ' ಎಂದು ಒಬ್ಬರನ್ನೊಬ್ಬರು ಪ್ರಶ್ನಿಸಿಕೊಳ್ಳುತ್ತಿರುವುದನ್ನು ಕಂಡು ಆ ಯುವಕನು ಮತ್ತೆ ಬಿಸಲ್‌ಪುರ, ಕೊಸಲ್‌ಪುರಗಳ ನಡುವೆ ಯುದ್ಧ ನಡೆಯುವುದೆಂದೂ, ಭೀಮವರ್ಮರು ಆಯುಧ ಹಿಡಿಯಬಲ್ಲ ಪ್ರತಿ ಪುರುಷನನ್ನೂ




ಕರೆದುಕೊಂಡು ಬರುವಂತೆ ವಾರ್ತೆ ಕಳುಹಿ ಸಿರುವರೆಂದೂ ಅವರಿಗೆ ತಿಳಿಸಿದ.

ಅಷ್ಟೇ ಅಲ್ಲದೆ ಈ ಸೈನಿಕರ ದಳಕ್ಕೆ ರಾಮ ಸಿಂಗನು ನಾಯಕನಾಗಿರುವನೆಂತಲೂ, ಸೋಮಶರ್ಮರು ಈ ವಿಷಯದಲ್ಲಿ ಸ್ವತಃ ಆಜ್ಞೆಗಳನ್ನು ಕೊಡುವರೆಂತಲೂ ತಿಳಿಸಿದ, ಆ ಯುವಕ.

ಈ ಸುದ್ದಿ ಕೇಳಿ ಜನ ವಿವಿಧರೀತಿಯಲ್ಲಿ ಮಾತನಾಡಿಕೊಳ್ಳುತ್ತಿದ್ದರು. ದುರ್ಗಾಧಿಪತಿ ಯಾದ ಭೀಮವರ್ಮನೆಂದರೆ ಅವರಿಗೇನೂ ಅಷ್ಟು ಪ್ರೀತಿಯಿಲ್ಲವೆಂದು ಆ ಮಾತುಗಳಿಂದ ಊಹಿಸಬಹುದು. ಇಷ್ಟರಲ್ಲೇ ಕುದುರೆ ಹತ್ತಿ ರಾಮಸಿಂಗು ಅಲ್ಲಿಗೆ ಬಂದ.

ಬಂದಕೂಡಲೇ ಆತನು ಹೀಗೆಂದ: "ಎಲ್ಲರೂ ಸಿದ್ಧರಾಗಿ, ಕತ್ತಲಾಗುವದುನ್ನ ಹೊರಡಬೇಕು." ರಾಮಸಿಂಗ್ ಭೀಮ ವರ್ಮನ ಬಲಗೈಯಿದ್ದಂತೆ. ಆತನ ಆಜ್ಞೆ ಪ್ರಕಾರ ಎಲ್ಲರೂ ಸಿದ್ಧರಾಗ ತೊಡಗಿದರು. ಇಷ್ಟರಲ್ಲಿ ರಾಮಸಿಂಗನು ಅವರಲ್ಲೊಬ್ಬನನ್ನು ಉದ್ದೇಶಿಸಿ 'ಮುದಿಗಂಗು ಎಲ್ಲಿ?' ಎಂದು ಕೇಳಿದ.

"ಪ್ರಾಯಶಃ ಹೊಲದಲ್ಲಿ ಇರಬಹುದು" ಎಂದು ಆವ್ಯಕ್ತಿ ಉತ್ತರವಿತ್ತ. ಮುದಿಗಂಗು ಹೊಲ ಊರಾಚೆಯಿದೆ. ವಿಜಯವರ್ಮ, ರಾಮಸಿಂಗರು ಅಲ್ಲಿಗೆ ಧೌಡಾಯಿಸಿದರು.

ಮುದಿಗಂಗು ಹೊಲದಲ್ಲಿ ಕೆಲಸ ಮಾಡಿ ಕೊಳ್ಳುತ್ತಾ ಏನೋ ಹಾಡಿಕೊಳ್ಳುತ್ತಿದ್ದ. ಇವರಿಬ್ಬರು ಬಂದ ಶಬ್ದ ಕೇಳಿಸಲಿಲ್ಲವೇನೋ. ಆತ ತನ್ನ ತಲೆಯೆತ್ತಿ ಸಹ ಇತ್ತಕಡೆ ನೋಡ ಲಿಲ್ಲ. "ಏನಯ್ಯಾ ಗಂಗು, ನಿನಗೆ ಕರೆ ಬಂದಿದೆ. ಈಗಲೇ ಬಂದು ಕೋಟೆಯಲ್ಲಿರುವ ಸೈನಿಕರ ನಾಯಕತ್ವ ವಹಿಸಬೇಕೆಂದು ಸೋಮಶರ್ಮರ ಆಜ್ಞೆಯಾಗಿದೆ" ಎಂದ ರಾಮಸಿಂಗ್. "ನೀನಿದ್ದೀಯಲ್ಲಪ್ಪಾ" ಎಂದ ಗಂಗು ನಗುತ್ತಾ. "ಆತನಿರುವುದಿಲ್ಲ, ಕೋಟೆಯಲ್ಲಿರುವ ಪುರುಷರನ್ನೆಲ್ಲಾ ಕೂಡಿಸಿ ಕೊಂಡು ರಾಮನಗರಕ್ಕೆ ಹೋಗುತ್ತಾನೆ. ಭೀಮವರ್ಮರು ಹಾಗೆಂತ ಸುದ್ದಿ ಕಳುಹಿಸಿ ದ್ದಾರೆ" ಎಂದ ವಿಜಯವರ್ಮ.

"ಹಾಗಾದರೆ ಮತ್ತೆ ನಾನಿಲ್ಲಿ ಯಾರ ನಾಯ ಕತ್ವ ವಹಿಸಬೇಕು?" ಎಂದ ಮುದಿಗಂಗು.



"ಆರು ಜನ ಸೈನಿಕರೂ, ಸೋಮಶರ್ಮರೂ ಇಲ್ಲಿಯೇ ಇರುತ್ತಾರೆ" ಎಂದ ಸಿಂಗ್. ಆದರೆ ಗಂಗು ಆತನ ಮಾತುಗಳನ್ನು ಕೇಳಲೇ ಇಲ್ಲ.

ಆತ ಸನಿಯದಲ್ಲೇ ಇದ್ದ ಅರಣ್ಯದ ಕಡೆಗೆ ನೋಡುತ್ತಿದ್ದಾನೆ. "ಏನಷ್ಟು ಸೂಕ್ಷ್ಮವಾಗಿ ನೋಡುತ್ತಿರುವೆ?" ಎಂದು ಕೇಳಿದ ಸಿಂಗ್. "ಪಕ್ಷಿಗಳು" ಎಂದ ಗಂಗು ಹಾಗೇ ನೋಡುತ್ತಾ. ಇನ್ನೂರು ಗಜ ದೂರದಲ್ಲಿರುವ ಮಹಾವೃಕ್ಷಗಳ ಮೇಲೆ ಒಂದು ಪಕ್ಷಿಗಳ ಸಮೂಹವು ಚೆಲ್ಲಾಪಿಲ್ಲಿಯಾಗಿ ಹಾರುತ್ತಾ ಅರಚುತ್ತಿವೆ!

"ಪಕ್ಷಿಗಳನ್ನೇನಯ್ಯಾ ನೋಡುತ್ತಿರುವೆ?" ಎಂದ ರಾಮಸಿಂಗ್. "ಅದೇ ತಿಳಿಗೇಡಿತನ. ಪಕ್ಷಿಗಳೆಂದರೆ ಅರಣ್ಯ ಕಾವಲುಗಾರರಿದ್ದಂತೆ. ಹೊಸಬರು ಯಾರಾದರೂ ಬಂದರೆ ಅವುಗಳ ಅಲಪಿನಿಂದ ನಮಗೆ ತಿಳಿಯುತ್ತದೆ. ಈಗ ಆ ಮರಗಳ ಮೇಲೆ ಶತ್ರುಗಳೇ ಹೊಂಚಿ ಕುಳಿತಿರುವರೆಂದು ಭಾವಿಸು. ಅದು ನಿನಗೆ ತಿಳಿಯುವುದಾದರೂ ಹೇಗೆ?" ಎಂದ ಗಂಗು.

"ಶತ್ರುಗಳು ಎಲ್ಲಿಂದ ಬರ್ತಾರಯ್ಯಾ ಇಲ್ಲಿಗೆ? ರಾಮನಗರದಲ್ಲಿರುವ ನಮ್ಮ ಸೈನಿಕರ ಹೊರತು ಹತ್ತಿರದಲ್ಲಿ ಬೇರೆ ಸೈನ್ಯಗಳು ಎಲ್ಲಿವೆ!" ಎಂದ ಸಿಂಗ್. "ಎಲೈ ಹುಚ್ಚಾ, ಭೀಮವರ್ಮನನ್ನೂ ಆತನ ಅನುಚರರನ್ನೂ ಮಟ್ಟಹಾಕಲು ಬೇರೆಲ್ಲಿಂದಲೋ ಬರಬೇಕೇ ಶತ್ರುಗಳು? ಈ ಸುತ್ತಮುತ್ತಲು ನಮ್ಮನ್ನು ದ್ವೇಷಿಸದವರು ಯಾರುಇದ್ದಾರೆ?" ಎಂದ ಗಂಗು.

ರಾಮಸಿಂಗನ ಬಾಯಿಂದ ಸ್ವಲ್ಪಹೊತ್ತು ಮಾತು ಬರಲಿಲ್ಲ. ಗಂಗು ಹೇಳಿದ್ದು ಸತ್ಯಕ್ಕೆ ದೂರವಾದ ಮಾತಲ್ಲ. "ಸರಿ. ಸರಿ. ಇನ್ನು ಹೊರಡು. ಸೋಮಶರ್ಮನು ಈಗಾಗಲೇ ಉರಿದುಬೀಳುತ್ತಿರಬಹುದು. ಆದರೂ ನಿನ್ನ ಬಾಯಿಗೆ ಕಡಿವಾಣವಿಲ್ಲ" ಎಂದ. ಅಷ್ಟರಲ್ಲಿ ಎಲ್ಲಿಂದ ಬಂತೋ ಒಂದು ಬಾಣ ಜುರ್ರೆಂದು ಕಾಲಪಾಶದಂತೆ ಬಂದು ಮುದಿ ಗಂಗು ಎದೆಯಲ್ಲಿ ಚುಚ್ಚಿಕೊಂಡಿತು! ಆ ಏಟಿಗೆ ಕುಸಿದು ಬಿದ್ದ ಆತ. ರಾಮಸಿಂಗನು ತಟ್ಟನೆ ಹಾರಿ ಹತ್ತಿರದಲ್ಲೇ ಇದ್ದ ಒಂದು ಬಂಡೆಯ ಹಿಂದೆ ಹೋಗಿ ಅವಿತುಕೊಂಡ. ವಿಜಯವರ್ಮ ತನ್ನ ಧನುಸ್ಸನ್ನು ತೆಗೆದು ಬಾಣವನ್ನು ಹೆದೆಗೇರಿಸಿ ಅರಣ್ಯದಕಡೆ ನೋಡಿದ. ಆದರೆ ಅರಣ್ಯ



ಪ್ರಶಾಂತವಾಗಿತ್ತು. ಎಲೆಯಾದರೂ ಮಿಸು ಕಾಡಲಿಲ್ಲ.

ರಾಮುಸಿಂಗನೂ ವಿಜಯವರ್ಮನೂ ಬಾಧೆಯಿಂದ ಒದ್ದಾಡುತ್ತಿದ್ದ ಗಂಗೂ ಹತ್ತಿರಕ್ಕೆ ಹೋದರು. ಮೃದುಹೃದಯಿ ವಿಜಯವರ್ಮ ಗಂಗು ಎದೆಗೆ ಚುಚ್ಚಿಕೊಂಡಿದ್ದ ಬಾಣವನ್ನು ಎಳೆಯಲು, ಪಾಪ, ಆ ವೃದ್ಧ 'ಅಬ್ಬಾ' ಎಂದು ಚೀರುತ್ತಾ ಪ್ರಾಣಬಿಟ್ಟ.

ಕೈಯಲ್ಲಿದ್ದ ಬಾಣವನ್ನು ವಿಜಯವರ್ಮನು ಪರೀಕ್ಷಿಸಿ "ಈ ಬಾಣ ತುಂಬಾ ವಿಚಿತ್ರವಾಗಿದೆ" ಎಂದ. "ಎಲ್ಲಿ, ನೋಡುವಾ" ಎಂದು ರಾಮುಸಿಂಗನು ಬಾಣವನ್ನು ತೆಗೆದುಕೊಳ್ಳಲು ಕೈಚಾಚಿದ. ವಿಜಯವರ್ಮ ಬಾಣದಮೇಲಿರುವ ರಕ್ತವನ್ನು ಒರೆಸಿ ತೋರಿಸಿದ. ಬಾಣದ ಮೇಲೆ "ಗಂಗುಗೆ 'ಶಬ್ದವೇಧಿ'ಯ ಕಾಣಿಕೆ" ಎಂದು ಸಣ್ಣ ಅಕ್ಷರಗಳಲ್ಲಿ ಕೆತ್ತಿದೆ! "ಶಬ್ದವೇಧಿ? ಯಾರೀ ಶಬ್ದವೇಧಿ? ಕಳ್ಳನ ಹೆಸರಂತೆ ಇದೆಯಲ್ಲಾ. ಸರಿ, ನಮಗೂ ಸಹ ಈ ಗತಿ ಹಿಡಿಯುವವರೆಗೂ ಯಾಕಿರಬೇಕು ಇಲ್ಲಿ? ಗಂಗೂ ಇಲ್ಲದಿದ್ದರೂ ಕಡೆಯಪಕ್ಷ ಆತನ ಶವವನ್ನಾದರೂ ತೆಗೆದುಕೊಂಡು ಹೋಗುವ, ಬಾ" ಎಂದ ರಾಮುಸಿಂಗ್.

ಇಬ್ಬರೂ ಸೇರಿ, ಗಂಗು ಶವವನ್ನು ಹತ್ತಿರದಲ್ಲೇ ಇದ್ದ ಆತನ ಮನೆಗೆ ಹೊತ್ತುಕೊಂಡು ಹೋದರು. ಕೂಡಲೇ ಸೋಮಶರ್ಮನಿಗೆ ಸುದ್ದಿ ಹೋಯಿತು. ಆತನು ತುಸ ಸಮಯಕ್ಕೆಲ್ಲಾ ಅಲ್ಲಿಗೆ ಬಂದ. "ಏನು, ಏನು ನಡೆಯಿತು" ಎಂದು ಕೇಳಿದ. "ಇನ್ನೇನು ನಡೆಯಬೇಕು. ಗಂಗೂನ ಕೊಂದರು" ಎಂದ ರಾಮುಸಿಂಗ್.

ಈ ವಾರ್ತೆ ಕೇಳಿದ ಕೂಡಲೇ ಸೋಮಶರ್ಮನ ಮೈಯೆಲ್ಲಾ ಬೆಮರಿತು. ಮುಖ ಬಿಳುಪೇರಿತು. ಕಾಲುಗಳು ಗಡಗಡ ನಡುಗಿದುವು. ಆತನು ಅಲ್ಲೇ ಇದ್ದ ಒಂದು ಆಸನದಲ್ಲಿ ಕುಕ್ಕರಿಸಿದ.

"ಇದು ಹೇಗೆ ನಡೆಯಿತು?" ಆತನ ಸ್ವರ ಗದ್ಗದವಾಗಿತ್ತು. ಆಗ ಅತನಿಗೆ ವಿಜಯವರ್ಮ ಆ ಬಾಣವನ್ನು ತೋರಿಸಿದ. "ಶಬ್ದವೇಧಿ?—ಶಬ್ದವೇಧಿಯ ಹೆಸರಿಂದ ನಾಟಕವಾಡುತ್ತಿರುವ ಈ ಶತ್ರು ಯಾರು? ನಮ್ಮ ಕೆಡಕುಕೋರುವವರು ಬಹಳ ಜನರೇನೋ ಇರುವರು. ಆದರೆ ಇಷ್ಟೊಂದು ಸಾಹಸ



ಯಾರಿಗಿದೆ? ಯಾರೀತ? ಬಾಬೂಸಿಂಗನೇ? ಅಲ್ಲಲ್ಲ. ಪ್ರಮಾರ್ ವಂಶೀಯನೇ? ಇರಲಾರದು. ಮತ್ತೆ ಯಾರಾಗಿರಬಹುದು? ಏನು ಹೇಳುವೆ ರಾಮುಸಿಂಗ್" ಎಂದ ಶರ್ಮ.

"ಚಂಡೀದಾಸ ನಿರಬಾರದೇಕೆ?" ಎಂದ ಸಿಂಗ್.

"ಇಲ್ಲ. ಇಲ್ಲ. ಅಂತಹವರಿಗೆ ಇಷ್ಟು ಸಾಹಸ ಇರಲಾರದು. ಇನ್ನೇನು ಯುದ್ಧ ನಡೆಯಲಿದೆ. ಯಾರೋ ಬಿಲಾಸಪುರದವನೇ ಈ ಕಾರ್ಯ ಮಾಡಿರಬೇಕು!" ಎಂದ ಸೋಮಶರ್ಮ. "ನೀವು ಅಸಾಧ್ಯರು. ಎಲ್ಲ ವಿಷಯ ತಿಳಿದೇ ಹೀಗೆ ಹೇಳುವಿರಲ್ಲಾ ಸೋಮಶರ್ಮ! ನಮ್ಮ ಭೀಮವರ್ಮರಿಗೆ ಒಂದು ಪಕ್ಷವೆಂಬುದೇ ಇಲ್ಲವೆಂಬ ವಿಷಯ ಯಾರಿಗೆ ತಿಳಿಯದು? ಲಾಭದಾಯಕವಾದ ಪಕ್ಷ ವಹಿಸುವಾತ! ಶತ್ರುಗಳು ಹೊರಗಿಂದಲೇ ಬರಬೇಕೆ? ಆತ ಎಷ್ಟು ಮನೆಗಳನ್ನು ಹಾಳುಮಾಡಿಲ್ಲ? ಎಷ್ಟು ಘೋರ ಕೃತ್ಯಗಳನ್ನು ಎಸಗಿಲ್ಲ? ಎಷ್ಟು ಪ್ರಾಣಗಳನ್ನು ಬಲಿಗೊಡಲಿಲ್ಲ?....' ಎಂದು ಆವೇಶದಿಂದ ಸಿಂಗ್ ನುಡಿದು ತಟಕ್ಕನೆ ಮಾತು ನಿಲ್ಲಿಸಿದ.

ಸೋಮಶರ್ಮ ಮೆಲ್ಲನೆ ಅಂದ "ನಿನ್ನ ಬಾಯಿ ತುಂಬಾ ದುಡುಕು. ಅದು ಬಹಳ ಕೆಟ್ಟದು ನೋಡು. ಸ್ವಲ್ಪ ಹದ್ದಿನಲ್ಲಿಟ್ಟುಕೋ ಬಾಯಿ, ತರುವಾಯ ಚಿಂತಿಸಿ ಫಲವಿಲ್ಲ." ಹಾಗೇ ಮಾತು ಬದಲಾಯಿಸಿ "ಗಂಗು ಇಲ್ಲ, ನಿನ್ನನ್ನು ಕಳುಹಿಸಿಬಿಟ್ಟರೆ ಆಗದು. ನೀನಿಲ್ಲೇ ಇರಬೇಕು. ಕಾಲಕೆಟ್ಟದು" ಎಂದ.

ಮೂವರೂ ಹೊರಗೆ ಬಂದರು. ಬಂದು ಕುದುರೆಗಳನ್ನೇರಿ ಮೊಗಸಾಲೆಕಡೆ ಹೊರಟರು. ಅಲ್ಲಿ ನೆರೆದಿದ್ದ ಸೈನಿಕರನ್ನು ನೋಡಿದ ಕೂಡಲೇ ಸೋಮಶರ್ಮನಿಗೆ ತುಸ ಸಮಾಧಾನವಾಯಿತು. "ಪರವಾಯಿಲ್ಲ, ಭೀಮವರ್ಮರು ರೊಚ್ಚಿಗೇಳಬೇಕಾದ ಕೆಲಸವಿಲ್ಲ" ಎಂದ. ಇಷ್ಟರಲ್ಲಿ "ಆತನ್ಯಾರು?" ಎಂದು ಸಿಂಗ್ ಬೆಚ್ಚಿಬಿದ್ದ.

ಯಾರೋ ಮೊಗಸಾಲೆಹಿಂದಿನಿಂದ ಓಡಿ ಹೋಗುವುದು ಕಾಣಿಸಿತು. "ಹಿಡಿಯಿರಿ, ಏನು ದಿಕ್ಕು ನೋಡುತ್ತಿರುವಿರಿ" ಎಂದು ಸಿಂಗು ಕಿರುಚಿ, ಕುದುರೆಯನ್ನು ಅತ್ತ ಕಡೆ ದೌಡಾ

ಯಿಸಿದ. ಬಹಳ ಜನ ಆತನನ್ನು ಅನುಸರಿಸಿದರು. ಆದರೆ ಅವರೆಲ್ಲರಿಗಿಂತ ತಿಳುವಳಿಕೆಯುಳ್ಳ ಕೆಲಸ ಮಾಡಿದ ವಿಜಯವರ್ಮ. ಬಾಣವನ್ನು ಹೆದೆಗೇರಿಸಿಬಿಟ್ಟ. ಆದರೆ ಗುರಿ ಸರಿಯಾಗಿರಲಿಲ್ಲವಾದುದರಿಂದ ಆ ಬಾಣ ಆ ಸವಾರನ ಕುದುರೆಯನ್ನು ತಾಕಿಕೊಂಡು ಹೋಯಿತು.

ಆತ ಅದೃಷ್ಟವಂತ. ಎಲ್ಲರ ಕಣ್ಣು ತಪ್ಪಿಸಿ ಅರಣ್ಯದಲ್ಲಿ ಮಾಯವಾದ. ನಿರಾಶೆಹೊಂದಿ ಹಿಂತಿರುಗಿದರು ಎಲ್ಲಾ. ಇಷ್ಟರಲ್ಲಿ ಸೋಮಶರ್ಮನ ಅನುಚರ ನಾರಾಯಣ "ಇದೇನೋ ನೋಡಿ" ಎಂದು ಒಂದು ಪತ್ರ ತಂದು ಕೊಟ್ಟ. ಅದರಲ್ಲೊಂದು ವಿಚಿತ್ರವಾದ ಪದ್ಯ ಬರೆದಿದೆ. ಸೋಮಶರ್ಮ ಆ ಪದ್ಯ ಓದಲು ಪ್ರಾರಂಭಿಸಿದ.

ನನ್ನ ಹತ್ತಿರವಿರುವುದು ನಾಲ್ಕು ಬಾಣಗಳು
ತುಂಬಾ ಹರಿತವಾದವು, ತೆಗೆಯುವುವು ದುಷ್ಟರ
ಪ್ರಾಣಗಳು.

ಮುದಿಗಂಗು ಪ್ರಾಣ ತೆಗೆಯಿತೊಂದು ಬಾಣ
ಶಾಸ್ತಿ ಆಯಿತು ಆತನಿಗೆ,
ಕ್ರೂರ ರಾಮಸಿಂಗನಿಗಾಗಿ ಇಟ್ಟಿರುವೆ ಒಂದು ಬಾಣ
ಅವನೇ ಅಲ್ಲವೇ ಸೋನಗರವನ್ನು ಸುಟ್ಟ ಸೈತಾನ
ಸೋಮಶರ್ಮನಿಗಾಗಿ ಒಂದು ಬಾಣ ಇಟ್ಟಿರುವೆನು
ಅಭಯವರ್ಮನ ಕತ್ತು ಕತ್ತರಿಸಿದವನಲ್ಲವೇ ಅವನು



ದ್ರೋಹಿ ಭೀಮವರ್ಮನಿಗೆ ಕಾದಿದೆ ನಾಲ್ಕನೇಬಾಣ
ಅವನೇ ಅಲ್ಲವೇ ಯದುವಂಶದ ವಿಷಪುಚ್ಛ
ದ್ರೋಹಿಗಳೇ ನೀವು ಮಾಡಿದ ಅನಾಹುತಗಳ
ನೆನೆಯಿರಿ
ನೀವು ಎಸಗಿದ ಕ್ರೂರಕೃತ್ಯಗಳಿಗೆ ಉಚಿತ
ಶಿಕ್ಷೆಯಂ ಪಡೆಯುವಿರಿ.
ಇಂತು ಶಬ್ದವೇಧಿ,
ಆತನ ಅನುಚರರು

ಇದನ್ನು ಓದಿ ಸೋಮಶರ್ಮ "ಅಯ್ಯೋ ಇದೇನು. ಎಂತಹ ಮಾತು. ನಾನು ಅಭಯ ವರ್ಮನ ಕತ್ತು ಕೊಯ್ದೆನಂತೆ. ಇದಕ್ಕಿಂತಲೂ ಸುಳ್ಳು ಬೇರೆ ಇರುವುದೇ?...." ಎಂದು ಇನ್ನೂ ಏನೋ ಹೇಳಲು ಪ್ರಾರಂಭಿಸಿದ.

ಆಗ ರಾಮಸಿಂಗ್ ಆತನ ಹತ್ತಿರ ಹೋಗಿ ಆತನ ಕಿವಿಯಲ್ಲಿ ಏನೋ ಹೇಳಿದ. ಕೂಡಲೇ ಸೋಮಶರ್ಮನ ಬಾಯಿ ಮುಚ್ಚಿತು. ಆತ ವಿಜಯವರ್ಮನ ಕಡೆ ಬೆದರಿದ ದೃಷ್ಟಿಯಿಂದ ನೋಡಿದ. ಇದರ ಕಾರಣ ವಿಜಯವರ್ಮ ಗ್ರಹಿಸದಿರಲಿಲ್ಲ. ಆತನ ತಂದೆಯ ಹೆಸರೇ ಅಭಯವರ್ಮ. ಯಥಾರ್ಥವೇನೋ ಯಾರಿಗೂ ತಿಳಿಯದು. ಆದರೆ ಆತನ ತಂದೆ ಬಹಳ ವರ್ಷಗಳ ಹಿಂದೆ ಗಿರಿಕೋಟೆಯಲ್ಲಿ ಹತ್ಯೆ ಮಾಡಲ್ಪಟ್ಟನು.

ಆಗ ಆ ಹತ್ಯೆ ಕುರಿತು ತುಂಬಾ ಗಲಭೆ ಆಯಿತು. ವಿಚಾರಣೆ ಸಹ ನಡೆಯಿತು. ಆದರೆ ದಿನಗಳು ತೀರ ಕೆಟ್ಟವಾಗಿದ್ದುದರಿಂದ, ಅಪರಾಧ ಹೇಗೆ ನಡೆಯಿತೋ ನಿರ್ಧಾರ ಮಾಡಲಾಗಲೀ, ದೋಷಿಯನ್ನು ಹಿಡಿದು ಶಿಕ್ಷೆಮಾಡಲಾಗಲೀ ಸಾಧ್ಯವಾಗಲಿಲ್ಲ.

ತರುವಾಯ ಸೋಮಶರ್ಮ ರಾಮಸಿಂಗನೊಂದಿಗೆ ಆಲೋಚಿಸಿ ನಡೆದ ವಿಷಯವನ್ನೆಲ್ಲಾ ಸವಿಸ್ತಾರವಾಗಿ ಒಂದು ಕಾಗದದಲ್ಲಿ ಬರೆದು ವಿಜಯವರ್ಮನ ಕೈಗೆ ಕೊಟ್ಟನು.

ಹೊಸದಾಗಿ ಶೇಖರಿಸಿದ ಸೈನಿಕರನ್ನು ಸಂಗಡ ಕರೆದುಕೊಂಡು ವಿಜಯವರ್ಮನಿಗೆ ಭೀಮವರ್ಮನ ಹತ್ತಿರ ಹೋಗುವಂತೆ ಆಜ್ಞಾಪಿಸಿದನು. ಎಲ್ಲವನ್ನೂ ಹೇಳಿಯಾದಮೇಲೆ ವಿಜಯವರ್ಮ ಕಾಗದವನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು, ರಾಮನಗರಾಭಿಮುಖನಾಗಿ ತನ್ನ ದಳದೊಂದಿಗೆ ಹೊರಟ. (ಸಶೇಷ)






[ಗಿರಿಕೋಟೆಯ ಅಧಿಪತಿ ಭೀಮವರ್ಮ ತಂದೆಯನ್ನು ಕೊಂದು ಮಗನನ್ನು ಸಲಹಿದ. ಯುದ್ಧಕ್ಕೆ ಹೋಗಿ ಸೈನಿಕರಿಗಾಗಿ ವಾರ್ತೆ ಕಳುಹಿಸಲು ಇದ್ದ ಸೈನ್ಯವೆಲ್ಲಾ ಹೊರಟಿತು. ಇಷ್ಟರಲ್ಲಿ ಇಲ್ಲಿ ಗುಪ್ತ ಶತ್ರುಗಳು ತಲೆ ಎತ್ತಿ ಆತನ ಭಂಟನೊಬ್ಬನನ್ನು ಬಲಿಗೊಂಡರು. ಮುಂದೆ ಓದಿ—]

**ಭೀ**ಮವರ್ಮ ಮತ್ತು ಆತನ ಸೈನಿಕರು ಅಂದು ರಾತ್ರಿ ರಾಮನಗರದಲ್ಲಿ ಹಾಯಾಗಿ ನಿದ್ದೆ ಮಾಡಿದರು. ಬೆಳಗಿನ ಜಾವದಲ್ಲೇ ಎದ್ದು ಭೀಮವರ್ಮ ತನ್ನ ಕೆಲಸಗಳಲ್ಲಿ ನಿರತನಾದ. ಆತ ಕಟ್ಟುನಿಟ್ಟಾದ ಮನುಷ್ಯ. ಕೆಲಸಮಾಡಿ ಸುವ ಚಾತುರ್ಯವುಳ್ಳವ.

ಅಂದು ಬೆಳಗ್ಗೆ ವಿಜಯವರ್ಮ ಸೈನಿಕರೊಂದಿಗೆ ರಾಮನಗರವನ್ನು ಸೇರುವ ವೇಳೆಗೆ ಭೀಮವರ್ಮ ತನ್ನ ಬಿಡದಿಯ ಒಂದು ಕೊಠಡಿಯಲ್ಲಿ ಕುಳಿತಿದ್ದ. ಅಲ್ಲಿ ಹನ್ನೆರಡುವರ್ಷದಷ್ಟರ ಹುಡುಗನೊಬ್ಬನೂ ಇದ್ದ.

ವಿಜಯವರ್ಮ ಕುದುರೆಯಿಂದ ಇಳಿದು ಲಗುಬಗೆಯಿಂದ ಒಳಗೆ ಪ್ರವೇಶ ಮಾಡಿದ. ಭೀಮವರ್ಮನು ತಲೆ ಎತ್ತಿನೋಡಿ "ವಿಜಯ, ನೀನು ಹೇಗೆ ಬಂದೆ? ರಾಮುಸಿಂಗ್ ಏನಾದ?" ಎಂದು ಕೇಳಿದ. ವಿಜಯವರ್ಮನು ನಮಸ್ಕಾರ ಮಾಡಿ ತಾನು ತಂದಿದ್ದ ಪತ್ರವನ್ನು ಆತನ ಕೈಗೆ ಕೊಡುತ್ತಾ "ಇದನ್ನು ಓದಿದರೆ ನಿಮಗೇ ಎಲ್ಲವೂ ತಿಳಿಯುತ್ತದೆ" ಎಂದ. ಆ ಪತ್ರ ಓದಿದಕೂಡಲೇ ಭೀಮವರ್ಮನ ಮುಖವು ಕೋಪದಿಂದ ಕೆಂಪೇರಿತು. "ಯಾವುದೋ ಪದ್ಯವನ್ನು ಕುರಿತು ಬರೆದಿದೆ ಇದರಲ್ಲಿ. ನೀನು ಓದಿರುವೆಯೇನು?" ಎಂದು ವಿಜಯವರ್ಮನನ್ನು ಪ್ರಶ್ನಿಸಿದ. ವಿಜಯತಲೆಯಾಡಿಸಿದ. "ಅದರಲ್ಲಿ ನಿಮ್ಮ ತಂದೆಯನ್ನು ಸೋಮಶರ್ಮ ಕೊಂದಂತೆ ಏನೋ ಬರೆದಿದೆ" ಎಂದ




ಭೀಮುವರ್ಮ. "ನನಗೇನೂ ತಿಳಿಯದೆಂದು ಹೇಳಿದರು ಸೋಮಶರ್ಮರು" ಎಂದು ಉತ್ತರಕೊಟ್ಟ ವಿಜಯ.

"ಹಾಗೋ. ಸರಿ. ನಾನು ನಿಧಾನವಾಗಿ ನಿನಗೆ ಈ ವಿಷಯಗಳನ್ನೆಲ್ಲಾ ಹೇಳುವೆನು. ಆಗ ಜನ ಚಂಡಿದಾಸನು ಕೊಂದಿರಬಹುದೆಂದು ತಿಳಿದಿದ್ದಿತು. ಸಮಯ ಕುದುರಲಿಲ್ಲವಾಗಿ ಆಗ ಏನುಮಾಡಲೂ ಸಾಧ್ಯವಾಗಲಿಲ್ಲ. ನಾನೊಂದು ಪತ್ರ ಬರೆದುಕೊಡುತ್ತೇನೆ. ತಂಗಳು ತಿಂದಮೇಲೆ ನೀನು ಅದನ್ನು ತೆಗೆದುಕೊಂಡು ಹಿಂದಿರುಗು" ಎಂದ ಭೀಮುವರ್ಮ.

ಆಗ ವಿಜಯವರ್ಮನು: "ಪತ್ರವನ್ನು ಬೇರೆ ಯಾರ ಕೈಯಲ್ಲಾದರೂ ಕಳುಹಿಸಿ. ನನ್ನನ್ನೂ ಸಹ ನಿಮ್ಮೊಂದಿಗೆ ಕರೆದೊಯ್ಯಿರಿ" ಎಂದ. ಆದರೆ ಇದಕ್ಕೆ ಭೀಮುವರ್ಮ ಒಪ್ಪಲಿಲ್ಲ.

ಆತನು ಪತ್ರವನ್ನು ಬರೆಯುತ್ತಿರುವಾಗ ವಿಜಯವರ್ಮ ತಂಗಳು ತಿನ್ನುತ್ತಿದ್ದ. ಇಷ್ಟರಲ್ಲಿ ಯಾರೋ ಆತನ ಕೈಯನ್ನು ಸೋಕಿದಂತಾಯಿತು. ಒಂದು ಎಳೆ ಕಂಠ ಆತನ ಕಿವಿಯಲ್ಲಿ ಗುಸುಗುಟ್ಟಿತು. "ಪೂರ್ವ ದಿಕ್ಕಿನಲ್ಲಿರುವ ಬೆಟ್ಟಕ್ಕೆ ದಾರಿ ಹೇಳುವೆಯಾ ಎಳೆಯಾ?" ಎಂದು. "ಗಿರಿಕೋಟೆ ದಾರಿಯಲ್ಲಿ ಹೋಗು. ಅಲ್ಲೊಂದು ನದಿ ಕಾಣಿಸುತ್ತದೆ. ಯಾರನ್ನಾದರೂ ಅಲ್ಲಿ ವಿಚಾರಿಸಿದರೆ ನಿನಗೆ ದಾರಿ ತಿಳಿಯುತ್ತದೆ" ಎಂದು ವಿಜಯವರ್ಮನೂ ಸಹ ಮೆಲ್ಲನೆ ಸಮಾಧಾನಕೊಟ್ಟ. ಇದೆಲ್ಲಾ ಕ್ಷಣಮಾತ್ರದಲ್ಲಿ ನಡೆದುಹೋಯಿತು. ವಿಜಯವರ್ಮ ಮತ್ತೆ ತಲೆ ಎತ್ತಿ ನೋಡಲು, ಅಲ್ಲಿ ಕುಳಿತಿದ್ದ ಆ ಹುಡುಗ ಕಾಣಿಸಲಿಲ್ಲ.

"ನೋಡಿದೆಯಾ, ಆ ಹುಡುಗ ನನ್ನನ್ನು 'ಎಳೆಯಾ' ಎಂದು ಸಂಭೋದಿಸಿದ. ಅವನಿಗೆ ಕೊಡ್ತೇನೆ ಸರಿಯಾದ ಕೆಲಸ" ಎಂದು ಅಂದುಕೊಂಡ ವಿಜಯವರ್ಮ.

ಸ್ವಲ್ಪ ಹೊತ್ತಿಗೆಲ್ಲಾ ಭೀಮವರ್ಮ ಪತ್ರ ಬರೆದುಕೊಟ್ಟ. ಅದನ್ನು ತೆಗೆದುಕೊಂಡು ವಿಜಯವರ್ಮ ಗಿರಿಕೋಟೆಯ ಕಡೆ ಹೊರಟ. ಆತ ಹಾಗೆ ಹೋದನೋ ಇಲ್ಲವೋ, ಕೊಸಲ್ಪೂರು ಸಾಮಂತರಲ್ಲಿ ಒಬ್ಬನಾದ ಚಂದ್ರದುರ್ಗಾಧಿಪತಿಯ ಹತ್ತಿರದಿಂದ ಒಬ್ಬ ದೂತ ಬಂದು ಅಂದು ಪ್ರಾತಃಕಾಲ ಯುದ್ಧ ಷುರುವಾಯಿತೆಂದೂ, ಭೀಮವರ್ಮನ ಸಹಾಯ ಅತ್ಯವಸರವೆಂದೂ ಹೇಳಿದ.




ಆದರೆ ಭೀಮವರ್ಮ ಆತನು ಹೇಳಿದ್ದನ್ನು ಕೇಳುವ ಪರಿಸ್ಥಿತಿಯಲ್ಲಿರಲಿಲ್ಲ. "ಕರುಣ ಎಲ್ಲಿಗೆ ಹೋದಳು? ಎಲ್ಲಿ ಆ ಹುಡುಗಿ?" ಎಂದು ಅರ್ಭಟಿಸುತ್ತಿದ್ದಾನೆ. ಇದನ್ನು ಕೇಳಿ ಒಬ್ಬನು "ಯಾವ ಹುಡುಗಿ ಮಹಾಸ್ವಾಮಿ? ಇಲ್ಲಿ ಯಾವ ಹುಡುಗಿಯೂ ಇಲ್ಲವಲ್ಲಾ?" ಎಂದ. "ಎಲೋ ಮಂಕೂ, ಈವರೆವಿಗೆ ನನ್ನೊಂದಿಗೆ ಒಬ್ಬ ಹುಡುಗನಿರಲಿಲ್ಲವೇ, ಅವನೇ ಕರುಣ" ಎಂದ ಭೀಮವರ್ಮ. "ನೀವು ಕರುಣಾಕರನೆಂದು ಕರೆಯುತ್ತಿದ್ದವನೆ? ಆ ವ್ಯಕ್ತಿ ಒಂದರ್ಧಗಂಟೆ ಹಿಂದೆ ಕುದುರೆ ಹತ್ತಿ ಹೋದರು" ಎಂದ ನಾರಾಯಣ ಎಂಬಾತ.

"ಹಾಗಾದರೆ ಏಕೆ ಬೆಪ್ಪರಂತೆ ನೋಡುವಿರಿ? ನಾರಾಯಣ. ನೀನು ಕೆಲ ಸೈನಿಕರೊಂದಿಗೆ ಆ ಹುಡುಗಿಯನ್ನು ಹಿಂಬಾಲಿಸಿ ಹೋಗಿ ಹಿಡಿಯಬೇಕು. ಕರೆದೊಯ್ದು ಗಿರಿಕೋಟೆಯಲ್ಲಿ ಇಡು. ಇಲ್ಲದಿದ್ದರೆ ನಿನಗೆ ಗೊತ್ತಿದೆತಾನೇ?" ಎಂದು ಗರ್ಜಿಸಿದ. ತಕ್ಷಣ ನಾರಾಯಣ ಆರುಜನ ಸೈನಿಕರನ್ನು ಕರೆದುಕೊಂಡು ಕರುಣಾಕರನ ಬೆನ್ನಟ್ಟಿದ.

ಆ ಮೊದಲೇ ಹೊರಟ ವಿಜಯವರ್ಮ ಗಿರಿಕೋಟೆಯ ಸಮೀಪದಲ್ಲಿದ್ದ ಕೆಸರಿನ ಪ್ರದೇಶವನ್ನು ಸಮೀಪಿಸಲು ಅಲ್ಲಿ ಕೆಸರಿನಲ್ಲಿ ಸಿಕ್ಕಿಕೊಂಡಿದ್ದ ಒಂದು ಕುದುರೆ ಕಾಣಿಸಿತು. ಸವಾರನೂಸಹ ಅಲ್ಲೇ ಎಲ್ಲೋ ಹತ್ತಿರದಲ್ಲಿರಬಹುದೆಂದುಕೊಂಡ. ಅಷ್ಟರಲ್ಲಿ ಆತನಿಗೊಬ್ಬ ಹುಡುಗ ಕಾಣಿಸಿದ. ತಾನು ಭೀಮವರ್ಮನ ಗುಡಾರದಲ್ಲಿದ್ದಾಗ ಪೂರ್ವ ದಿಕ್ಕಿನ ಬೆಟ್ಟಕ್ಕೆ ದಾರಿಕೇಳಿದ ಹುಡುಗನೇ ಆತನೆಂದು ಊಹಿಸಿದ. ಕೆಸರಿನಲ್ಲಿ ಬಿದ್ದು ಸಾಯುತ್ತಿರುವ ಕುದುರೆ ಅವನದೇ ಎಂದು ಗ್ರಹಿಸಿದ. ತನ್ನೆಡೆಗೆ ಕರೆದು, ಆತನನ್ನುಸಹ ತನ್ನ ಕುದುರೆಯ ಮೇಲೇರಿಸಿಕೊಂಡ ವಿಜಯವರ್ಮ.

ಕೊಂಚದೂರ ಹೋದಮೇಲೆ "ನಿನ್ನ ಹೆಸರೇನಪ್ಪಾ?" ಎಂದು ಕೇಳಿದ ವಿಜಯ. ಆ ಹುಡುಗ "ಕರುಣಾಕರ" ಎಂದು ಹೇಳಿದ. "ಭೀಮವರ್ಮ ನಿನಗೇನಾಗಬೇಕು?" "ನನಗೇನೂ ಸಂಬಂಧವಿಲ್ಲ. ತನ್ನ ಸ್ವಾರ್ಥಕ್ಕಾಗಿ ನನ್ನನ್ನು ಬಂಧಿಸಬೇಕೆಂದು ಹವಣಿಸಿದ. ಆತನ ಕೈಗೆ ಸಿಕ್ಕಿದರೆ ನನಗೆ ಮುಪ್ಪು ಖಂಡಿತ. ಅಲ್ಲಿಂದ ತಪ್ಪಿಸಿಕೊಂಡು ಹೋಗುತ್ತಿರುವೆನು, ಎಳೆಯಾ!" ಎಂದ ಆ ಹುಡುಗ.



"ಎಲ ಎಲಾ, ಮತ್ತೆ ನನ್ನನ್ನು 'ಎಳೆಯಾ' ಎಂದು ಕೂಗುವೆಯಾ? ನಿನಗೆ ಬುದ್ಧಿ ಕೆಟ್ಟಿರುವುದೇನು? ನಾನು ನಿನಗಿಂತಲೂ ಕಿರಿಯನೇ? ಹಾಂ. ನೀನು ಭೀಮವರ್ಮನ ಕೈಯಿಂದ ತಪ್ಪಿಕೊಂಡು ಹೋಗುತ್ತಿರುವೆ. ನಾನು ನಿನಗೆ ಸಹಾಯಮಾಡಿದೆನೆಂದು ಆತನಿಗೆ ತಿಳಿಯಿತೋ ನನಗೂ ಸಹ ಮುಪ್ಪು ಬಂದಿತ. ನನಗೇಕೆ ಇಲ್ಲದಗೊಡವೆ?" ಎಂದ ವಿಜಯವರ್ಮ. ಆ ಹುಡುಗ ತನಗೆ ಸಹಾಯ ಮಾಡುವಂತೆ ತುಂಬಾ ಪ್ರಾರ್ಥಿಸಿಕೊಂಡ.

ವಿಜಯನಿಗೆ ತುಂಬಾ ಅನುಕಂಪವುಂಟಾಯಿತು. "ನಿನಗೇನೂ ಭಯವಿಲ್ಲ. ನಿನ್ನ ಪ್ರಾಣಕ್ಕೆ ನನ್ನಪ್ರಾಣ ಕೊಟ್ಟೇನು" ಎಂದು ಅಭಯಕೊಟ್ಟ. ಅತನು ಹಾಗೆ ನುಡಿದನೋ ಇಲ್ಲವೋ ಹಿಂದಿನಿಂದ ಯಾರೋ ಬೊಬ್ಬೆಯಿಡುತ್ತಿರುವಂತೆ ಕೇಳಿಸಿತು. ಅವರಿಬ್ಬರೂ ಆಗಲೇ ನದಿಯ ದಡವನ್ನು ಸಮೀಪಿಸಿದ್ದರು.

ವಿಜಯವರ್ಮನು ಕೂಗಿದಾಕ್ಷಣ ಅಂಬಿಗನು ಬಂದ. ಕರುಣಾಕರನನ್ನು ನೋಡಿ "ಈತನಾರು?" ಎಂದು ಕೇಳಿದ. "ನಮ್ಮ ಬಳಗದವರು" ಎಂದು ವಿಜಯ ಹೇಳಲು, ಕರುಣಾಕರನನ್ನು ನಿಟ್ಟಿಸಿ ನೋಡಿ ನಗಲು ಪ್ರಾರಂಭಿಸಿದ. ವಿಜಯವರ್ಮನು ಕೋಪಿಸಿಕೊಳ್ಳಲು, ನಗು ತಡೆದುಕೊಂಡ.

ಆದರೆ ಅಂಬಿಗನು ವಿಜಯವರ್ಮನನ್ನು ಮಾಮೂಲು ಸ್ಥಳದಲ್ಲಿ ಇಳಿಸಲಿಲ್ಲ. ಇದು ವಿಜಯವರ್ಮನಿಗೆ ತುಂಬಾ ಸೋಜಿಗವಾಗಿ ಕಾಣಿಸಿತು. ಕಾರಣ ಕೇಳಲು ಅಂಬಿಗ ಸಂಜ್ಞೆ ಮಾಡಿದ. ಎದುರಾಗಿದ್ದ ಒಂದು ಮರದಮೇಲೆ ಬಾಣವನ್ನು ಹೆದೆಗೇರಿಸಿ ಗುರಿ ನೋಡುತ್ತಿರುವನೊಬ್ಬಾತ "ಯಾರದು?" ಎಂದು ಕೂಗಿದ. "ಯಾರಾದರೇನು?" ಇದು ವಿಜಯನ ಸವಾಲು. "ಈತನು ವಿಜಯವರ್ಮ. ಮತ್ತೆ ಯಾರೂ ಅಲ್ಲ" ಎಂದು ಅಂಬಿಗನು ಹೇಳುತ್ತಿರುವಷ್ಟರಲ್ಲಿ ಒಂದು ಬಾಣ ರೊಯ್ಯನೆ ಬಂದು ವಿಜಯವರ್ಮನ ಕುದುರೆಯ ಹೃದಯಕ್ಕೆ ನಾಟಿತು. ಈ ಗಲಭೆಯಲ್ಲಿ ಕರುಣಾಕರ ಮೊದಲೇ ನೀರಿನಲ್ಲಿ ಹಾರಿ ದಡವನ್ನು ಸೇರಿಬಿಟ್ಟಿದ್ದ. ಆದರೆ ವಿಜಯವರ್ಮನು ಹಾರುವಷ್ಟರಲ್ಲಿ ಕುದುರೆ ಕುಸಿದು ಬೀಳುವುದೂ, ಹಡಗು ಮುಗುಚಿಕೊಳ್ಳುವುದೂ ಸಂಭವಿಸಿತು.



ಹಾಗೂ ಹೀಗೂ ವಿಜಯವರ್ಮ ದಡ ಸೇರುವವರೆಗೆ ಕರುಣಾಕರನು ಅಲ್ಲಿಂದ ಕದಲಲಿಲ್ಲ. ಅದೊಂದು ದಟ್ಟನಾದ ಅಡವಿ. ಒಂದು ಕ್ಷಣವಾದರೂ ಅಲ್ಲಿ ನಿಲ್ಲದೆ ಇಬ್ಬರೂ ಓಡಲು ಪ್ರಾರಂಭಿಸಿದರು. ಆದರೆ ತುಸ ಹೊತ್ತಿಗೆಲ್ಲಾ ಕರುಣಾಕರ ಆಯಾಸಗೊಂಡು ಕುಂಟುತ್ತಾ ನಡೆಯಲು ಮೊದಲು ಮಾಡಿದ. ಆಗ ವಿಜಯವರ್ಮನು ಕರುಣಾಕರನಿಗೆ ಆಸರೆ ಕೊಟ್ಟು ನಡೆಸಿದ. ಸ್ವಲ್ಪದೂರ ಆ ರೀತಿ ಸಾಗಲು ವಿಜಯವರ್ಮನು ತಟಕ್ಕನೆ ನಿಂತು ಅಂದ : "ನಿನ್ನನ್ನು ನೋಡಿ ಅಂಬಿಗನು ಬಿದ್ದು ಬಿದ್ದು ನಕ್ಕನೇಕೋ ನನಗೀಗ ಅರ್ಥವಾಗುತ್ತಿದೆ. ನೀನು ಹೀಗೆ ಸೊರಗಿಕೊಂಡು, ಬಲಹೀನನಾಗಿ, ಸುಕುಮಾರನಾಗಿರುವುದನ್ನು ನೋಡಿ ಹುಡುಗಿ ಎಂದು ತಿಳಿದಿರಬೇಕು"

"ಇಲ್ಲ ಇಲ್ಲ" ಎಂದ ಕರುಣಾಕರ. ಲಜ್ಜೆ ಅಡಗಿತ್ತು ಆ ಮಾತಿನಲ್ಲಿ. "ಹಾಗೆನ್ನಬೇಡ. ನಿನ್ನನ್ನುಕಂಡು ಯಾರಾದರೂ ಹುಡುಗಿ ಎಂತಲೇ ತಿಳಿಯುವರು! ಅವನದೇನೂ ತಪ್ಪಿಲ್ಲ" ಎಂದು ನಕ್ಕ ವಿಜಯವರ್ಮ.

ಹಾಗೇ ಮತ್ತಷ್ಟು ದೂರ ಹೋಗಲು ಒಂದು ಜಿಂಕೆ ಅವರಮುಂದೆ ರಿವ್ವನೆ ನುಗ್ಗಿ ಓಡಿಹೋಯಿತು. ಇದುವರೆವಿಗೂ ವಿಜಯ ಮತ್ತು ಕರುಣಾಕರರು ನಿಧಾನವಾಗಿ ನಡೆಯುತ್ತಿದ್ದರು. ಆದರೆ ಈಗ ವಿಜಯವರ್ಮನಿಗೇನೋ ಅನುಮಾನವುಂಟಾಯಿತು. ಎತ್ತರವಾದ ಮರದಮೇಲೇರಿ ನೋಡಲು ನದಿಯ ಇತ್ತಕಡೆದಡದಲ್ಲಿ ಏನೋ ಕದಲುತ್ತಿರುವಂತೆ ಕಾಣಿಸಿತು. ಅನುಮಾನ ದೃಢವಾಯಿತು. ಇಬ್ಬರೂ ಮತ್ತೆ ಮುಂದೆಸಾಗಿದರು. ಗಿರಿಕೋಟೆ ಅರಣ್ಯದ ಆಚೆಕೊನೆಯನ್ನು ಮುಟ್ಟುವಷ್ಟರಲ್ಲಿ ಮತ್ತೆ ಏನೋ ಸಪ್ಪಳವಾಯಿತು. ಕೂಡಲೇ ವಿಜಯವರ್ಮ ಒಂದು ಮರದ ಹಿಂದೆ ಅವಿತುಕೊಂಡ. ಕರುಣಾಕರನಿಗೆ ಇದೆಲ್ಲಾ ಅರ್ಥವಾಗಲಿಲ್ಲ.

"ಹುಶ್" ಎಂದು ವಿಜಯವರ್ಮ ಬೆರಳಿಂದ ಸಂಜ್ಞೆಮಾಡಿದ. ಅವರಿಗೆ ನೂರುಗಜ ದೂರದಲ್ಲಿ ಒಂದು ಮರದಮೇಲೆ ಒಬ್ಬ ಧನುರ್ಧಾರಿಯಾಗಿ ನಾಲ್ಕುದಿಕ್ಕುಗಳನ್ನು ಪರಿಶೀಲಿಸಿ ನೋಡುತ್ತಿದ್ದಾನೆ. "ಎಡಗಡೆಯಿಂದ ತಪ್ಪಿಸಿಕೊಂಡು ಹೋಗೋಣ ನಡೆ" ಎಂದ ವಿಜಯವರ್ಮ. ಅವರು ಹಾಗೇ ತುಸದೂರ




ಹೋದರು. ಆ ಪ್ರದೇಶವೆಲ್ಲಾ ವಿಜಯವರ್ಮನಿಗೆ ಹೊಸದಾಗಿತೋರಿತು. ಆದುದರಿಂದ ಅವರು ಎಚ್ಚರಿಕೆಯಿಂದ ನಡೆಯುತ್ತಿದ್ದರು.

ಅಷ್ಟರಲ್ಲಿ ಯಾರೋ ಹಾಡುವುದು ಕೇಳಿಸಿತು. ಇಬ್ಬರೂ ನಿಂತಲ್ಲೇ ನಿಂತುಬಿಟ್ಟರು. ಶಬ್ದ ಬಂದಕಡೆ ನೋಡಲು ಅವರಿಗೊಂದು ಕಂದಕ ಕಾಣಿಸಿತು. ಪಕ್ಕದಲ್ಲೊಂದು ಹಾಳು ಬಿದ್ದ ಕಟ್ಟಡವಿತ್ತು. ಅಲ್ಲೊಂದು ಒಲೆ ಉರಿಯುತ್ತಿದೆ. ಕಳ್ಳರವೇಷದಲ್ಲಿದ್ದವನೊಬ್ಬನು ಒಲೆಮುಂದೆ ಕುಳಿತು ಏನೋ ಹಾಡುತ್ತಿದ್ದಾನೆ. ಇಬ್ಬರು ಮೂವರು ಅಲ್ಲೇ ಹತ್ತಿರದಲ್ಲಿ ಮಲಗಿಕೊಂಡಿದ್ದರು. ಅಡಿಗೆ ಸಿದ್ಧವಾದಂತಿದೆ. ಅಡಿಗೆಮಾಡುತ್ತಿದ್ದವನು ಸಿಳ್ಳುಹಾಕಿದ ಕೂಡಲೇ ಸುತ್ತಮುತ್ತಲಿಂದ ಮೂವತ್ತು ನಲವತ್ತು ಜನ ತಟ್ಟೆಗಳೊಂದಿಗೆ ಬಂದರು.



ಅವರೆಲ್ಲರೂ ಕುಳಿತುಕೊಂಡ ತರುವಾಯ ಬಹುಠೀವಿಯಿಂದ ಒಬ್ಬಾತ ಬಂದು ಕುಳಿತುಕೊಂಡ. ಆತನ ವೈಖರಿ ನೋಡಿದರೆ ಆತನೇ ಇವರ ನಾಯಕನಂತೆ ತೋರುತ್ತಿತ್ತು. "ಗೆಳೆಯರೇ, ಬೇಗ ಆಗಲಿ. ಬೇಗಬೇಗ ಬಡಿಸು ಧನಪಾಲ್. ಚಿಕ್ಕದೊಂದು ಕೆಲಸ ಮಾಡುವುದಿದೆ" ಎಂದ ಆ ವ್ಯಕ್ತಿ. ಅವರ ಊಟ ಮುಗಿಯುವಷ್ಟರಲ್ಲಿ ಒಂದು ಬಾಣ ರಿವ್ವನೆ ಬಂದು ಹಾಳುಬಿದ್ದ ಕಟ್ಟಡದ ಗೋಡೆಗೆ ತಗುಲಿ ಚೂರುಚೂರಾಯಿತು. ಇದು ಮೊದಲೇ ವ್ಯವಸ್ಥೆ ಮಾಡಿಕೊಂಡಿದ್ದ ಸಂಜ್ಞೆಯಾಗಿರಬೇಕು. ಏಕೆಂದರೆ, ಇದನ್ನು ನೋಡಿದಕೂಡಲೇ ಅವರೆಲ್ಲಾ ಕುಳಿತಲ್ಲೇ ಕೈ ತೊಳೆದುಕೊಂಡು ಎದ್ದರು. ನಾಯಕನು ಎಲ್ಲರಿಗಿಂತ ಮೊದಲೇ ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದು "ಸಂಗಡಿಗರೇ, ಭೀಮವರ್ಮನೋ, ಇಲ್ಲ ಅವನ ಅನುಚರರಲ್ಲಿ ಕೆಲವರೋ ಸಿಕ್ಕಿಬಿದ್ದಿದ್ದಾರೆ. ಜ್ಞಾಪಕವಿಟ್ಟುಕೊಳ್ಳಿ. ದಿಕ್ಕಿಲ್ಲದೆ ಸತ್ತ ಅಭಯವರ್ಮನೊಬ್ಬನದೇ ಅಲ್ಲ, ಇನ್ನೂ ಎಷ್ಟೋ ಜನರ ಹಗೆ ಸಾಧಿಸಬೇಕು ನಾವು" ಹೀಗೆ ಹೇಳಲು ಎಲ್ಲಿದ್ದವರೆಲ್ಲ ಕ್ಷಣಮಾತ್ರದಲ್ಲಿ ಮತ್ತೆ ಅಡವಿಯಲ್ಲಿ ಮಾಯವಾದರು. ವಿಜಯವರ್ಮ ಮತ್ತು ಕರುಣಾಕರರಿಗೆ ಸ್ವಲ್ಪ ಉಸಿರಾಡಲು ಅವಕಾಶವಾಯಿತು. "ನಾವು ಹೋಗೋಣವೇ?" ಎಂದ ಕರುಣಾಕರ.

"ಒಳ್ಳೆ ಅಸಾಮಿಯಪ್ಪ ನೀನು" ಎಂದ ವಿಜಯ.





"ಭೀಮವರ್ಮನ ಸೈನಿಕರನ್ನು ನೀನು ರಕ್ಷಿಸುವೆಯೇನು? ಕಳ್ಳರ ನಾಯಕನು ನುಡಿದ ಮಾತುಗಳು ನೀನು ಕೇಳಲಿಲ್ಲವೇ? ಎಂದ ಕರುಣಾಕರ.

"ಕಳ್ಳರ ಮಾತು ನಂಬುವುದೇ?" ಎಂದು ವಿಜಯವರ್ಮ ಬೆನ್ನು ತಿರುಗಿಸಿದ. ಕರುಣಾಕರ ಆತನನ್ನು ಹಿಂಬಾಲಿಸಿದ.

ಅತಿದೂರದಲ್ಲಿ ವಿಜಯವರ್ಮನಿಗೆ ನಾರಾಯಣ ಮತ್ತು ಆತನ ಅನುಯಾಯಿಗಳು ಬರುತ್ತಿರುವುದು ಕಾಣಿಸಿತು. ಅವರು ಬಯಲು ಪ್ರದೇಶವನ್ನು ಸೇರುವವೇಳೆಗೆ ನಾಲ್ಕು ಕಡೆಯಿಂದ ಬಾಣಗಳ ಸುರಿಮಳೆ ಪ್ರಾರಂಭವಾಯಿತು. ಅವರು ತಲ್ಲಣಿಸಿಹೋದರು.

ಶತ್ರುಗಳು ಮಾತ್ರ ಕಾಣೆಸರು. ಬಾಣಗಳು ಯಮನೋಪಾದಿಯಲ್ಲಿಬಂದು ಪ್ರಾಣಗಳನ್ನು ಬಲಿಗೊಳ್ಳುತ್ತಿವೆ. ನಿಮಿಷ ಮಾತ್ರದಲ್ಲಿ ಅವರೆಲ್ಲರ ಚರಿತ್ರೆ ಮುಗಿಯಿತು. ನಾರಾಯಣನೊಬ್ಬ ಉಳಿದಿದ್ದ. ಒಂದು ಸಾರಿ ನಾಲ್ಕು ದಿಕ್ಕಿಗೂ ನೋಡಿ ಆತನು ಓಡಲು ನಿಶ್ಚಯಿಸಿದ.

ಆತನ ಚರ್ಯೆಗಳನ್ನು ಗಮನಿಸುತ್ತಿದ್ದ ಶತ್ರುಗಳು ಹೊಟ್ಟೆ ಹುಣ್ಣಾಗುವಂತೆ ನಕ್ಕರು. ನಾರಾಯಣನಿಗೆ ಕೋಪ ಬಂತು. ಕಣ್ಣು ಮುಚ್ಚಿಕೊಂಡು ಒಂದು ಬಾಣವನ್ನು ಅರಣ್ಯದ ಕಡೆ ಬಿಟ್ಟ.

ಅದೃಷ್ಟವಶಾತ್ ಅದು ಯಾರಿಗೋ ತಗುಲಿರಬೇಕು. ಕೂಡಲೇ ಒಂದು ಸಂಕಟಕರವಾದ ಧ್ವನಿ ಕೇಳಿಸಿತು.



ಮತ್ತೆ ಬಾಣದ ಸುರಿಮಳೆ. ನಾರಾಯಣ ಪ್ರಾಣ ಉಳಿಸಿಕೊಳ್ಳಲು ಹವಣಿಸಿದ. ವಿಜಯ ಮತ್ತು ಕರುಣಾಕರರು ಅವನಪಾಡು ಏನಾಗುವುದೋ ಎಂದು ನೋಡುತ್ತಿದ್ದರು.

ಅಷ್ಟರಲ್ಲಿ ಒಂದು ಬಾಣ ಬಂದು ನಾರಾಯಣನ ಎದೆಗೆ ನಾಟಿತು. ಆತ ಕೂಡಲೇ ಕೆಳಗೆಬಿದ್ದ. ವಿಜಯವರ್ಮ ಆತನ ಹತ್ತಿರಕ್ಕೆ ಓಡಿದ. "ಅಭಯವರ್ಮನ ಮಗನನ್ನು ಕೊಲ್ಲಕೂಡದೆಂದು ಚಂಡಿದಾಸನ ಆಜ್ಞೆ" ಎಂದು ಯಾರೋ ಹೇಳಿದ ಮಾತು, ಆಗ ವಿಜಯವರ್ಮನ ಪ್ರಾಣವನ್ನು ಉಳಿಸಿತು. ಆತನೂ ಕರುಣಾಕರನೂ ಅಲ್ಲಿಂದ ಓಡಿದರು. ಸದ್ದು ನಿಲ್ಲುವವರೆಗೂ ಎಲ್ಲೂ ನಿಲ್ಲಲಿಲ್ಲ.

ಮತ್ತೆ ತಮ್ಮ ದಾರಿ ಹಿಡಿಯೋಣ ವೆಂದಿರುವಷ್ಟರಲ್ಲಿ ಚೆಲ್ಲಾಪಿಲ್ಲಿಯಾಗಿ ಓಡುತ್ತಿರುವ

ಗುಂಪೊಂದು ಕಾಣಿಸಿತು. ಇದನ್ನು ನೋಡಿ ವಿಜಯವರ್ಮ ಕೋಸಲೀಯರು ಯುದ್ಧದಲ್ಲಿ ಸೋತಂತೆ ಗ್ರಹಿಸಿದ. ಭೀಮವರ್ಮನ ಪಾಡೇನಾಯಿತೋ?

ಅವರಿಗೆ ಎಲ್ಲಿಂದಲೋ ಡುಡಿಯ ಶಬ್ದ ಕೇಳಿಸಿತು. ಆ ಶಬ್ದ ತಮ್ಮನ್ನು ಸಮೀಪಿಸುತ್ತಿರುವಂತೆ ತೋರಿತು.

ಅಲ್ಲಿಗೊಬ್ಬ ಬುಡಬುಡಿಕೆಯವನು ಬಂದ. ಆತನನ್ನು ಕಂಡಾಕ್ಷಣ ಕರುಣಾಕರ ಮೂರ್ಛೆಹೋದ. ವಿಜಯವರ್ಮ ಚೀರಿ ಬಿದ್ದ.

ಬಂದಾತನು ಮತ್ತೆಯಾರೂ ಅಲ್ಲ, ಭೀಮವರ್ಮ! "ಏನು ವಿಜಯ, ಒಳ್ಳೆ ಸ್ನೇಹಿತನನ್ನು ಸಂಪಾದಿಸಿದೆಯಲ್ಲಾ ಆತನ ಹೆಸರಾದರೂ ನಿನಗೆ ಗೊತ್ತೆ?" ಎಂದು ಕೇಳಿದ ಬುಡಬುಡಿಕೆಯವನ ವೇಷದಲ್ಲಿದ್ದ ಭೀಮವರ್ಮ.

"ಕರುಣಾಕರ ಅಂತಲ್ಲವೇ. ಆದೇನು ನೀವು ಈ ವೇಷದಲ್ಲಿರುವಿರಿ?" ಎಂದು ಕೇಳಿದ ವಿಜಯವರ್ಮ.

ಇದನ್ನು ಕೇಳಿ ಭೀಮವರ್ಮನಿಗೆ, ಕೋಪ ಬಂತು. "ಏನು ಮಾಡುವುದು? ನಮ್ಮ ಪಕ್ಷ ಸೋತುಹೋಯಿತು. ನಮ್ಮವರೆಲ್ಲಾ ಏನಾದರು? ಈತನೆಲ್ಲಿ ಸಿಕ್ಕಿದ ನಿನಗೆ?"

"ದಾರಿಯಲ್ಲಿ ಸಿಕ್ಕಿದ. ನಾರಾಯಣ ಮತ್ತು ಆತನ..."

ಎಂದು ಹೇಳುವಷ್ಟರಲ್ಲಿ ಭೀಮವರ್ಮ ಕಾತುರದಿಂದ "ಎಲ್ಲಿ ಅವರು" ಎಂದು ಕೇಳಿದ.

ವಿಜಯವರ್ಮ ನಡೆದ ವಿಷಯವನ್ನೆಲ್ಲಾ ಹೇಳಿದ. ಭೀಮವರ್ಮ ಉರಿದು ಬಿದ್ದ. "ಹಾಗಾದರೆ ನಾನು ಗಿರಿಕೋಟೆಗೆ ಹೋಗುವೆನು. ನೀನು ನಿನ್ನ ಸ್ನೇಹಿತನೊಂದಿಗೆ ಅಲ್ಲಿಗೆ ಬಾ" ಎಂದು ವಿಜಯವರ್ಮನಿಂದ ಭಾಷೆ ತೆಗೆದುಕೊಂಡು ಹೊರಟ.

ವಾಗ್ದಾನದ ಪ್ರಕಾರ ಕರುಣಾಕರನೊಂದಿಗೆ ವಿಜಯವರ್ಮ ಗಿರಿಕೋಟೆಗೆ ಹೋಗಬೇಕಾಯಿತು. ಅಲ್ಲಿ ಅವರಿಗಾಗಿ ಭೀಮವರ್ಮ ಕಾದಿದ್ದಾನೆ. [ಇನ್ನೂ ಇದೆ]






[ಪತ್ರದೊಂದಿಗೆ ಭೀಮವರ್ಮನ ಹತ್ತಿರ ಹೋಗಿದ್ದ ವಿಜಯವರ್ಮ ಹಿಂತಿರುಗಿ ಬರುತ್ತಾ ದಾರಿಯಲ್ಲಿ ಪುರುಷ ರೂಪದಲ್ಲಿ ಓಡಿಹೋಗುತ್ತಿದ್ದ ಕರುಣಳನ್ನು ಸೇರಿಕೊಂಡ. ಯುದ್ಧದಲ್ಲಿ ಭೀಮರ್ಮನ ಪಕ್ಷ ಸೋತುಹೋಯಿತು. ಭೀಮವರ್ಮ ಮಾರುವೇಷದಲ್ಲಿ ಪ್ರಾಣ ಉಳಿಸಿಕೊಂಡು ಓಡಿಹೋದ. ಅಲ್ಲಿ ಶತ್ರುಗಳು ಹೆಚ್ಚಿಕೊಂಡರು. ಭೀಮವರ್ಮನ ಆಜ್ಞೆಯ ಪ್ರಕಾರ ಕರುಣಳನ್ನು ಗಿರಿಕೋಟೆಗೆ ಸೇರಿಸುವನು ವಿಜಯವರ್ಮ]

ಗಿರಿಕೋಟೆಗೆ ಹಿಂತಿರುಗಿದ ವಿಜಯವರ್ಮನಿಗೆ ಅಲ್ಲಿನ ಜನರೆಲ್ಲಾ ತುಂಬಾ ನಿಸ್ಪೃಹತೆಯಿಂದಿರುವಂತೆ ತೋರಿ ಬಂದರು. ಯುದ್ಧದಲ್ಲಿ ಅಪಜಯ, ಶಬ್ದವೇಧಿಯ ಕಿರುಕುಳ, ಅವರನ್ನು ಬಾಡಿಸಿದ್ದವು. ಕೋಟೆಯಲ್ಲಿ ಪ್ರವೇಶಿಸಿದ ಕರುಣಾಕರ ಮತ್ತೆ ಕಾಣಿಸಲಿಲ್ಲ. ತನ್ನ ತಂದೆಯ ಸಾವನ್ನು ಕುರಿತು ಆತನು ಹೇಳಿದ ಮಾತುಗಳು ವಿಜಯನ ಮನಸ್ಸಿನಲ್ಲಿ ಮರುಕಳಿಸುತ್ತಿತ್ತು.

ಏನೂ ತೋರದೆ ಆತನು ರಾಮಸಿಂಗನನ್ನು ಕೇಳಿದ. ರಾಮಸಿಂಗನು ಒಂದು ಕ್ಷಣ ಅವನ ಕಡೆ ತೀವ್ರದೃಷ್ಟಿಯಿಂದ ನೋಡಿ "ನನಗೆ ಏನೂ ತಿಳಿಯದು. ನೀನು ಇಂತಹ ವಿಷಯಗಳನ್ನು ತಲೆಗೆ ಹಚ್ಚಿಕೊಳ್ಳಬೇಡ. ಇಲ್ಲ, ನಿನಗೆ ಅಷ್ಟು ಕುತೂಹಲವಿದ್ದರೆ ಸೋಮಶರ್ಮರನ್ನು ಕೇಳು" ಎಂದ. ಮರು ಮಾತನಾಡದೆ ವಿಜಯವರ್ಮ ಅಲ್ಲಿಂದ ಹೊರಟುಬಿಟ್ಟ.

ಭೀಮವರ್ಮ ತನ್ನ ಸೈನಿಕರಿಗೆ ಧೈರ್ಯ ಹೇಳಿ ಬೀಸಲ್ಪೂರು ಸಾಮಂತರಲ್ಲಿ ಒಬ್ಬನಾದ ದೇವದುರ್ಗಾಧಿಪತಿಗೆ ಒಂದು ಪತ್ರ ಕಳುಹಿಸಿದ. ಆತನು ಈ ರೀತಿ ಬಣ್ಣ ಬದಲಾಯಿಸಿದುದು ಯಾರಿಗೂ ಅಚ್ಚರಿಯನ್ನುಂಟು ಮಾಡಲಿಲ್ಲ. ಅದು ಆತನ ಅಭ್ಯಾಸ.




ವಿಜಯವರ್ಮ ಗ್ರಹಿಸಿಬಿಟ್ಟ. "ನನ್ನನ್ನು ಕರೆ ಕಳುಹಿಸಿದಿರಾ?" ಎಂದು ಮೆಲ್ಲನೆ ಕೇಳಿದ. 'ಹೌದು. ಕಂಡ ಕಂಡವರಿಗೆ ನೀನು ಏನೇನೋ ಪ್ರಶ್ನೆಗಳನ್ನು ಹಾಕುತ್ತಿರುವೆ ಯಂತೆ! ನಿನ್ನನ್ನು ಹೆತ್ತ ಮಗನಂತೆ ಸಲಹಿ ದೊಡ್ಡವನನ್ನಾಗಿ ಮಾಡಿದುದಕ್ಕೆ ಇದೇಯೋ ಪ್ರತಿಫಲ. ನಿನಗೇನು ಕಡಿಮೆ ಮಾಡಿದ್ದೇನೆ?" ಎಂದು ಒದರಿದ ಭೀಮವರ್ಮ.

"ಅಂತಹ ಕೃತಘ್ನ ನಾನಲ್ಲ. ಆದರೆ ನನ್ನ ತಂದೆಯ ಸಾವಿನ ವಿಷಯವಾಗಿ ವಿವಿಧ ವರ್ತಮಾನಗಳು ಕೇಳಿ ಬರುತ್ತಿವೆ. ಸತ್ಯ ತಿಳಿಯುವವರೆಗೆ ನನಗೆ ಸಮಾಧಾನವಾಗು ವಂತಿಲ್ಲ" ಎಂದ ವಿಜಯವರ್ಮ.

"ಹಾಗಾದರೆ ಕೇಳು. ಭಗವಂತನ ಸಾಕ್ಷಿ ಯಾಗಿ ಹೇಳುತ್ತಿರುವೆನು—ನಿನ್ನ ತಂದೆಯ ಸಾವಿಂದ ನನಗೆ ಯಾವ ವಿಧವಾದ ಸಂಬಂಧವೂ ಇಲ್ಲ. ಇನ್ನು ಅನುಮಾನ ಬಿಡು. ಇಲ್ಲ, ಕೂಡಲೇ ಕೋಟೆಯ ಹೊರಗೆ ಆರಣ್ಯದಲ್ಲಿ ನನ್ನ ಶತ್ರುಗಳೆಷ್ಟೋ ಜನರಿದ್ದಾರೆ. ನೀನೂ ಅವರೊಂದಿಗೆ ಸೇರಿಬಿಡು" ಎಂದು ಭೀಮವರ್ಮ ಆಣೆ ಇಟ್ಟ. ವಿಜಯನಿಗೆ ಒಂದು ರೀತಿ ಸಮಾಧಾನವಾಯಿತು. ಆತನು ಸಂತೋಷದಿಂದ ಸೋಮಶರ್ಮನ ಕಡೆ ತಿರುಗಿ ನೋಡಿದ. ಆದರೆ ಸೋಮಶರ್ಮನ ಮುಖ ನೋಡಿ ಆತನಿಗೆ ಆಶ್ಚರ್ಯವಾಯಿತು. ಆತನ ಮುಖ ಬಿಳಿಚಿಕೊಂಡಿತ್ತು! ಭಯದಿಂದ ಥರಥರ ನಡುಗುತ್ತಿದ್ದಾನೆ!! ವಿಜಯವರ್ಮ

ವಿಜಯವರ್ಮ ನೆಟ್ಟಗೆ ಸೋಮಶರ್ಮನ ಹತ್ತಿರ ಹೋಗಿ ರಾಮಸಿಂಗನಿಗೆ ಹಾಕಿದ ಪ್ರಶ್ನೆಯನ್ನೇ ಮತ್ತೆ ಹಾಕಿದ. ಸೋಮಶರ್ಮ "ಹಿಂದೊಂದುಸಾರಿ ನಿನಗೆ ಹೇಳಲಿಲ್ಲವೆ?" ಎಂದು ಹೇಳಿ ಅಲ್ಲಿಂದ ನಡೆದುಬಿಟ್ಟ. ವಿಜಯವರ್ಮನಿಗೆ ಸಂತೃಪ್ತಿಯಾಗಲಿಲ್ಲ. ಮತ್ತೆಯಾರನ್ನು ಕೇಳಲಿ ಎಂದು ಯೋಚಿಸುತ್ತಿರುವಲ್ಲಿ ಸೇವಕನೊಬ್ಬನು ಬಂದು "ಭೀಮವರ್ಮರು ಕರೆಯುತ್ತಿದ್ದಾರೆ" ಎಂದ.

ವಿಜಯನು ಹೋಗುವ ವೇಳೆಗೆ ಭೀಮವರ್ಮನು ತನ್ನ ಕೊಠಡಿಯಲ್ಲಿ ಕೋಪದಿಂದ ಕುದಿಯುತ್ತಿದ್ದಾನೆ. ಪಕ್ಕದಲ್ಲಿ ಸೋಮಶರ್ಮನನ್ನು ಹೊರತು ಬೇರೆ ಯಾರೂ ಇರಲಿಲ್ಲ. ಕೂಡಲೇ ತನಗೆ ಏಕೆ ಕರೆಬಂತೋ

ಅನುಮಾನದಿಂದ "ಸೋಮಶರ್ಮ ರೂ ಆಣೆಮಾಡಿ ಹೇಳಲಿ" ಎಂದ.

"ಓ, ತಪ್ಪುಮಾಡದವನಿಗೆ ಏನು ಭಯ? 'ಆಣೆಯಿಡಯ್ಯ' ಎಂದು ಭೀಮವರ್ಮ ಸೋಮಶರ್ಮನನ್ನು ಪುಸಲಾಯಿಸಿದ. ಆದರೆ ಸೋಮಶರ್ಮನ ಬಾಯಿಂದ ಮಾತೇ ಹೊರಡದಾಯಿತು. ಭೀತಿಯಿಂದ ಭೀಮವರ್ಮನನ್ನೇ ಎವೆಯಿಕ್ಕದೆ ನೋಡುತ್ತಿದ್ದಾನೆ!

ಇಷ್ಟರಲ್ಲಿ ಆ ಕೊಣೆಯ ಕಿಟಕಿಯ ಮುಖಾಂತರ ಒಂದು ಬಾಣ ಸರ್ರನೆ ಬಂದು, ಆ ಮೂವರಿಗೆ ಎದುರಾಗಿದ್ದ ಗೋಡೆಗೆ ತಗುಲಿತು. ಅದು ಶಬ್ದವೇಧಿ ಬಾಣವೆಂದು ಕೂಡಲೇ ಅವರು ಗ್ರಹಿಸಿದರು. ಸೋಮಶರ್ಮ ಕಿಟಾರನೆ ಕಿರಿಚಿ ಹಿಂದಕ್ಕೆ ಬಿದ್ದುಬಿಟ್ಟ. ಭೀಮ ಮತ್ತು ವಿಜಯವರ್ಮರು ಕಿಟಕಿಯ ಹತ್ತಿರ ಓಡಿ ಇಣಕಿ ನೋಡಿದರು. ಏನೂ ಕಾಣಿಸಲಿಲ್ಲ. ದೂರದಲ್ಲಿ ಮರಗಳಮೇಲೆ ಪಕ್ಷಿಗಳು ತಾವೇತಾವಾಗಿ ಹಾರಾಡುತ್ತಿವೆ.

ದ್ವಾರಪಾಲಕನು ಯಥಾವಿಧಿಯಾಗಿ ಕಾವಲುಕಾಯುತ್ತಲೇ ಇದ್ದ. "ಸರಿ, ವಿಜಯ ಇನ್ನು ನೀನು ಹೋಗಬಹುದು. ಸೋಮಶರ್ಮ ಆಣೆಯಿಡದೆ ಎಲ್ಲಿಗೆ ಹೋಗುತ್ತಾನೆ. ನೀನು ತುಸ ಹುಷಾರಾಗಿರುವುದು ಉತ್ತಮ" ಎಂದು ಭೀಮವರ್ಮನು ವಿಜಯವರ್ಮನಿಗೆ ಹೇಳಿ ಆತನನ್ನು ಕಳುಹಿಸಿಬಿಟ್ಟ.

ಆಗಲೇ ಚೇತರಿಸಿಕೊಳ್ಳುತ್ತಿದ್ದ ಸೋಮಶರ್ಮನ ಕಡೆ ತಿರುಗಿ "ನಿನ್ನ ಚರ್ಯೆಯಿಂದ




ಅವನಿಗೆ ಮತ್ತೆ ಅನುಮಾನ ಬಂತು. ಇಂದು ರಾತ್ರಿ ನೀನೂ ಸಹ ಆಣೆ ಇಟ್ಟರೆ ಆತನ ಪ್ರಾಣವನ್ನು ರಕ್ಷಿಸಿದವನಾಗುವೆ. ಇಲ್ಲದಿದ್ದರೆ ಆತನೂ ಸಹ ತನ್ನ ತಂದೆಯ ದಾರಿಯನ್ನೇ ಹಿಡಿಯಬೇಕಾಗುವುದು. ಸರಿ, ಕೂಡಲೇ ಆತನನ್ನು ಬಲಗಡೆ ಕೋಣೆಗೆ ಬದಲಾಯಿಸು"

"ಏನು? ಬಲಗಡೆ ಕೋಣೆಗೇ?" ಎಂದ ಸೋಮಶರ್ಮ ಕಂಪಿಸುವ ಕಂಠದಿಂದ.

"ಹೌದು, ಆತನ ಸಾವುಬದುಕು ನಿನ್ನ ಕೈಯಲ್ಲಿದೆ. ಆಣೆಯಿಟ್ಟು ಹೇಗೋ ಸಮಾಧಾನ ಮಾಡಿದೆಯಾದರೆ ಆತ ಉಳಿಯುತ್ತಾನೆ; ಇಲ್ಲ, ತಂದೆಯಂತೆ ಮಗನನ್ನೂ ಕೊಂದಪಾಪ ನಿನ್ನ ತಲೆಗೆ ಸುತ್ತಿಕೊಳ್ಳುತ್ತದೆ. ಏನು ಹೇಳುವೆ?" ಎಂದ ಭೀಮವರ್ಮ. ಕ್ಷಣಮಾತ್ರ



ಸೋಮಶರ್ಮನು ಸುಮ್ಮನಿದ್ದು "ಆತನ ಪ್ರಾಣ ಉಳಿಸಲು ಸುಳ್ಳಾದರೂ ಆಡುವೆನು" ಎಂದ. 'ಪಕ್ಕದ ಕೋಣೆಯಲ್ಲೇ ನಾನಿರುತ್ತೇನೆ. ಆತನ ಅನುಮಾನ ನಿರ್ಮೂಲ ಮಾಡುವುದು ನಿನ್ನ ಕರ್ತವ್ಯ' ಎಂದು ಭೀಮವರ್ಮ ಅಲ್ಲಿಂದ ಹೊರಟುಹೋದ.

ಮತ್ತೆ ಸ್ವಲ್ಪ ಹೊತ್ತಿಗೆ ವಿಜಯವರ್ಮ ಆ ಕೋಣೆಗೆ ಬಂದ. ಪಾಪ, ಸೋಮಶರ್ಮನ ಮುಖ ಬಿಳುಪೇರಿದೆ. ತಲೆ ಎತ್ತಿ ನೋಡಿ ವಿಜಯನ ಕೈಹಿಡಿದುಕೊಂಡು ಈ ರೀತಿ ಅಂದ: "ನಾನು ಆಣೆ ಇಟ್ಟರೆ ನಿನಗೆ ಸಮಾಧಾನವಾಗುವುದಲ್ಲವೇ? ಭಗವಂತನ ಸಾಕ್ಷಿಯಾಗಿ ಹೇಳುತ್ತೇನೆ. ನಿನ್ನ ತಂದೆಯ ಸಾವಿಗೂ ನನಗೂ ಯಾವುದೇ ವಿಧವಾದ ಸಂಬಂಧವಿಲ್ಲ"

ಆಗ ವಿಜಯವರ್ಮನು "ಸರಿ. ಯಾರಿಗೆ ಸಂಬಂಧವಿತ್ತೋ ನಿಮಗೆ ತಿಳಿದಿದೆಯೇ?" ಎಂದು ಕೇಳಲು, ಸೋಮಶರ್ಮನು ಬೆದರಿ "ಇಲ್ಲ, ಇಲ್ಲ, ನನಗೇನೂ ತಿಳಿಯದು" ಎಂದು ಹೊರಟುಹೋದ.

ನಿರ್ದೋಷಿಯೆಂದು ಆಣೆಯಿಟ್ಟು ಸೋಮಶರ್ಮ ಈ ರೀತಿ ತತ್ತರಿಸಿ ಹಠಾತ್ತನೆ ಹೊರಟುಹೋದುದನ್ನು ಕಂಡು ವಿಜಯವರ್ಮನಿಗೆ ಅಚ್ಚರಿಯಾಯಿತು. ನಾಲ್ಕು ಕಡೆಯೂ ಒಂದು ಸಾರಿ ದೃಷ್ಟಿಬೀರಿದ. ಎದುರಾಗಿದ್ದ ಕೋಣೆಯ ಕಿಟಕಿಯ ಬಾಗಿಲು ತುಸ ಕದಲಿದಂತೆ ಕಾಣಿಸಿತು. ಯಾರದೋ ಕಣ್ಣು ಕ್ಷಣಮಾತ್ರ ತಟಕ್ಕನೆ ಮಿಂಚಿ ಮರೆಯಾಯಿತು.

ನಡೆದ ಸಂಭಾಷಣೆಗಳನ್ನು ಯಾರೋ ಹೊಂಚಿ ಕೇಳಿದರೆಂದು ವಿಜಯವರ್ಮನು ಗ್ರಹಿಸಿದ. ಎಲ್ಲಾ ಒಂದು ಕಪಟ ನಾಟಕವೆಂಬ ವಿಷಯವೂ ಆತನಿಗೆ ತಿಳಿಯಿತು. 'ನಾನು ಜೇಡರ ಬಲೆಯಲ್ಲಿ ಸಿಕ್ಕಿಕೊಂಡಿದ್ದೇನೆ' ಎಂದುಕೊಂಡ. ಕೂಡಲೇ ಆತನಿಗೆ ಕರುಣಾಕರನ ನೆನಪುಬಂತು. 'ಪಾಪ, ಆತನೂ ನನ್ನಿಂದ ಬಲೆಯಲ್ಲಿ ಬಿದ್ದನಲ್ಲಾ' ಎಂದು ಪರಿತಪಿಸಿದ.

ವಿಜಯವರ್ಮನು ಆ ಕೋಣೆಯಿಂದ ಹೊರಗೆ ಬಂದ ಕೂಡಲೇ ದೂತನೊಬ್ಬನು ಬಂದು ಆತನ ಸ್ಥಳವನ್ನು ಬೇರೊಂದೆಡೆಗೆ ಬದಲಾಯಿಸಿದೆ ಎಂದು ಹೇಳಿದ. "ಏಕೆ? ಯಾವಕೋಣೆ?" ಎಂದು ಕೇಳಿದ ವಿಜಯ. "ಬಲಗಡೆ ಕೋಣೆ" ಎಂದು ಉತ್ತರ ಬಂತು.




"ಎಂತಹ ಕೋಣೆಯಪ್ಪಾ ಅದು. ಚೆನ್ನಾಗಿದೆ ಯೇನು?" ಎಂದು ವಿಚಾರಿಸಿದ ವಿಜಯ. "ಕೊಠಡಿಗೇನು? ಭೇಷಾಗಿದೆ. ದೆವ್ವಗಳಿವೆ ಅಂತ ಅಂತಾರೆ ಅಷ್ಟೆ" ಎಂದ ಆ ದೂತ. ಸಂಶಯಗ್ರಸ್ತನಾಗಿ ವಿಜಯವರ್ಮ ತನ್ನ ಹೊಸ ನಿವಾಸದಕಡೆ ಹೊರಟ.

ಆ ಕೋಣೆ ವಿಶಾಲವಾಗಿತ್ತಾದರೂ ಕತ್ತಲೆ. ಅದರಲ್ಲಿ ರಾಜ ಮಹಾರಾಜರು ಪವಡಿಸುವಂತಹ ಮಂಚವೊಂದಿತ್ತು. ಹಿಂದೆ ಯಾರೋ ಗಣ್ಯಮನುಷ್ಯರು ಇದ್ದ ಕೋಣೆ. ಇದೆಲ್ಲವನ್ನೂ ಕಂಡು ವಿಜಯವರ್ಮನಿಗೆ ಅನುಮಾನ ಮತ್ತಷ್ಟು ಹೆಚ್ಚಾಯಿತು. ಆತ ಗೋಡೆಗಳನ್ನೂ, ಅಲಮಾರುಗಳನ್ನೂ ತಟ್ಟಿ ತಟ್ಟಿ ಪರೀಕ್ಷಿಸಿದ. ಆದರೆ ಯಾವ ವಿಶೇಷವೂ ಕಾಣಬರಲಿಲ್ಲ. ಗುಪ್ತದ್ವಾರ ಎಲ್ಲೋ ಒಂದು ಕಡೆ ಇರಲೇಬೇಕು ಎಂದು ತೋರಿತು. ಇಂತಹ ಜಾಗದಲ್ಲಿ ಕ್ಷಣಮಾತ್ರವಾದರೂ ಕಣ್ಣುಮುಚ್ಚುವುದು ಅಪಾಯಕರವೆಂದು ಕೊಂಡ.

ಇಷ್ಟರಲ್ಲಿ ಆತನಿಗೆ ಕೋಣೆಯ ಬಾಗಿಲನ್ನು ಯಾರೋ ಉಗುರಿನಿಂದ ಪರಚುತ್ತಿರುವಂತೆ ಭಾಸವಾಯಿತು. ಹತ್ತಿರಹೋಗಿ ಕಿವಿ ಕೊಟ್ಟು ಕೇಳಿದ. ಯಾರೋ ಬಾಗಿಲು ತೆಗೆಯುವಂತೆ ಮೆಲು ಧ್ವನಿಯಲ್ಲಿ ಕೇಳು ತ್ತಿರುವರು. ಕಂಠಸ್ವರದ ಗುರುತು ಹಿಡಿದು ಕೂಡಲೇ ಕದ ತೆಗೆದ. ಒಂದು ಕೈಯಲ್ಲಿ ಬಾಕು ಹಿಡಿದುಕೊಂಡು ಕರುಣಾಕರ ಒಳಗೆ ಪ್ರವೇಶಿಸಿದ. "ಏನು ಸಮಾಚಾರ? ಕೋಟೆ ಯಲ್ಲಿ ಪ್ರವೇಶಿಸಿದಮೇಲೆ ಮತ್ತೆ ಕಾಣಿಸಲೇ ಇಲ್ಲವಲ್ಲಾ" ಎಂದು ಆತುರದಿಂದ ಪ್ರಶ್ನೆ ಮಾಡಿದ ವಿಜಯ. "ಏನುನಡೆದರೇನು. ಮತ್ತೆ ನಾವಿಲ್ಲಿಕಲೆತೆವು. ನೀನು ಮಾತ್ರ ಕೂಡಲೇ ಓಡಿಹೋಗು. ಬೆಳಗಾದರೆ ನಿನ್ನ ಪ್ರಾಣ ಉಳಿ ಯದು. ಅವರು ಗುಸಗುಸ ಮಾತನಾಡಿಕೊಳ್ಳು ತ್ತಿದ್ದುದನ್ನು ನಾನು ಕೇಳಿದೆ" ಎಂದ ಕರುಣಾ ಕರ. ತರುವಾಯ ಅವರಿಬ್ಬರೂ ಸೇರಿ ಗುಪ್ತ ದ್ವಾರಕ್ಕಾಗಿ ಹುಡುಕಲು ಪ್ರಾರಂಭಿಸಿದರು. ಇಷ್ಟರಲ್ಲಿ ಕೋಣೆಯ ಹೊರಗೆ ಹೆಜ್ಜೆ ಸಪ್ಪಳ ಕೇಳಿಸಿತು.

ದೀಪ ಆರಿಸಿ ಅವರಿಬ್ಬರೂ ಕತ್ತಲೆಯಲ್ಲಿ ಅವಿತಿಟ್ಟುಕೊಂಡರು. ಕೋಣೆಯ ಮೂಲೆ



ಯೊಂದರಲ್ಲಿ ಹಲಿಗೆಗಳು ಸ್ವಲ್ಪ ಸರಿದು ತುಸ ಬೆಳಕು ಒಳಗೆ ಪ್ರವೇಶಿಸಿತು. ವಿಜಯ ಮತ್ತು ಕರುಣಾಕರರು ಉಸಿರು ಬಿಗಿಹಿಡಿದುಕೊಂಡು ಇದನ್ನು ಗಮನಿಸುತ್ತಿದ್ದರು.

ಇಷ್ಟರಲ್ಲಿ ಭವನದ ಹೊರಗೆ ಗದ್ದಲವಾಯಿತು. ತತ್ ಕ್ಷಣ ಗುಪ್ತದ್ವಾರ ಮುಚ್ಚಿಕೊಂಡಿತು. ಇದು ಸರಿಯಾದ ಸಮಯವಲ್ಲವೆಂದು 'ಹಂತಕನು' ಹೊರಟು ಹೋಗಿರಬೇಕು! ಹೊರಗಿನ ಕೂಗಾಟ ಸ್ಪಷ್ಟವಾಗಿ ಕೇಳಿಸುತ್ತಿದೆ. "ಕರುಣ ಎಲ್ಲಿ? ಹುಡುಕಿ ಉಂ, ಹುಡುಕಿ" ಎಂದು ಯಾರೋ ಹೇಳುತ್ತಿದ್ದಾರೆ.

"ಕರುಣ ಯಾರಪ್ಪಾ? ಕರುಣಾಕರಾ, ನಿನ್ನನ್ನು ಹುಡುಗಿಯೆಂದು ಭ್ರಮೆ ಪಡುತ್ತಿದ್ದಾರೆಯೆ?" ಎಂದ ವಿಜಯ.

"ಅಸಲಿಗೇ ಮೋಸಬಂತು. ನನ್ನನ್ನು ಹಿಡಿಯುವವರೆವಿಗೂ ಅವರು ಸುಮ್ಮನಿರುವುದಿಲ್ಲ. ಬಾಗಿಲು ತೆಗೆದು ನನ್ನನ್ನು ಹೊರಗೆ ಹೋಗಗೊಡು. ಅವರು ನನ್ನನ್ನು ಹಿಡಿದುಕೊಂಡು ಸಂಭ್ರಮಪಡುತ್ತಿರುವಾಗ, ನೀನು ಉಪಾಯವಾಗಿ ತಪ್ಪಿಸಿಕೊಂಡು ಹೊರಟುಬಿಡು" ಎಂದು ಸಲಹೆಕೊಟ್ಟ ಕರುಣಾಕರ. ವಿಜಯನಿಗೆ ಆಗ ಪರಿಸ್ಥಿತಿ ಎಲ್ಲಾ ಅರ್ಥವಾಯಿತು.

"ನೀನು ಕರುಣಾಕರನಲ್ಲ. ಕರುಣ ನೀನೇ!" ಎಂದು ಉದ್ಗಾರ ತೆಗೆದ. ಕರುಣ ಬದುಲು ಹೇಳದೆ ತಲೆತಗ್ಗಿಸಿ ನಿಂತುಕೊಂಡಳು.

"ಕರುಣಾ! ಮಿಂಚಿಹೋದುದೇನಿಲ್ಲ. ಬದುಕಿ ಚೆನ್ನಾಗಿದ್ದರೆ ನಮ್ಮಿಬ್ಬರಿಗೂ ಅಗಲಿಕೆ ಇರಲಾರದು. ಸಾವು ತಪ್ಪುವಹಾಗಿಲ್ಲ. ನಾವಿಬ್ಬರೂ ಒಂದೇಸಾರಿ ಸಾಯುವ" ಎಂದ ವಿಜಯ.

ಯಾರೋ ಬಾಗಿಲನ್ನು ಬಲವಾಗಿ ಹೊಡೆಯುತ್ತಿದ್ದಾರೆ. ಮರು ನಿಮಿಷದಲ್ಲೇ ಭೀಮವರ್ಮನ ಕಂಠಧ್ವನಿ: "ಬಾಗಿಲು ತೆಗೆ ವಿಜಯಾ. ಒಳಗೆ ಯಾರಿರುವುದೋ ತಿಳಿದಿದೆ. ಬೂಟಾಟಿಕೆ ಸಾಕಿನ್ನು" ಎಂದನಾತ.

ಕೂಡಲೇ ವಿಜಯವರ್ಮ ಮತ್ತು ಕರುಣ ಗುಪ್ತದ್ವಾರದ ಕಡೆಗೆ ಓಡಿದರು. ಅವರು ಹೊರಬೀಳುವುದಕ್ಕೂ, ಭೀಮವರ್ಮನ ಭಟರ ಹೊಡೆತಕ್ಕೆ ಬಾಗಿಲು ಮುರಿಯುವುದಕ್ಕೂ ತಾಳೆಬಿತ್ತು.

ಗುಪ್ತ ದ್ವಾರಕ್ಕೆ ಆಚೆ ಇರಕಾಗಿಯೂ, ಕತ್ತಲೆಯಾಗಿಯೂ ಇದ್ದ ಒಂದು ದಾರಿಯಲ್ಲಿ ಹೋಗಲು ಬೇರೊಂದು ರಹಸ್ಯ ಪ್ರದೇಶ ವನ್ನು ಸೇರಿಕೊಂಡರು. ಮುಂದೆ ಹಾದಿ ತೋರದೆ ಅಲ್ಲೇ ನಿಂತುಬಿಟ್ಟರು.

ಈ ಪ್ರಮಾದ ಸಮಯದಲ್ಲಿ ಕರುಣ ವಿಜಯನಿಗೆ ತನ್ನ ಕಥೆಯನ್ನೆಲ್ಲಾ ಹೇಳಿದಳು. ತಾನೊಬ್ಬ ಜಮೀನುದಾರನ ಮಗಳೆಂತಲೂ ಅನಾಥಳಾದುದರಿಂದ ಚಿಕ್ಕಂದಿನಿಂದ ಚಂದ್ರ ದುರ್ಗಾಧಿಪತಿಯ ಮನೆಯಲ್ಲೇ ಬೆಳೆದ ನೆಂತಲೂ, ದ್ರೋಹ ಬುದ್ಧಿಯಿಂದ ಭೀಮ ತನ್ನನ್ನು ಬಲವಂತಮಾಡಿ ಕರೆಯಿಸಿಕೊಂಡು ತನ್ನನ್ನು ಪುರುಷವೇಷ ಧರಿಸುವಂತೆ ಮಾಡಿದ ನೆಂದೂ ಹೇಳಿದಳು.

ಈ ಕಥೆ ಕೇಳಿ ವಿಜಯನಿಗೆ ತುಂಬಾ ಮನ ಕರಗಿತು. "ಕರುಣ, ಈ ಶರೀರದಲ್ಲಿ ಪ್ರಾಣವಿರುವವರೆವಿಗೂ ನಿನ್ನನ್ನು ಬಿಟ್ಟಿರುವು ದಿಲ್ಲ" ಎಂದು ಪ್ರತಿಜ್ಞೆ ಮಾಡಿದ.

ಮತ್ತೆ ಹೆಜ್ಜೆಯ ಸಪ್ಪುಳ ಕೇಳಿಸಿತು. ತಿರುಗಿ ನೋಡಿದರು. ರಾಮಸಿಂಗ್ ನಿಂತಿ ದ್ದಾನೆ. "ಓ ಇಲ್ಲೇ ಇದ್ದಾರೆ. ಇನ್ನೇನು. ನೆನೆಸಿದಂತೆ ನಡೆದಿದೆ" ಎಂದ ರಾಮಸಿಂಗ್. ವಿಜಯವರ್ಮ ಚಾಕು ಹೊರ ತೆಗೆದ.

"ತಡೆಯಯ್ಯಾ, ದೊಡ್ಡ ಮನುಷ್ಯ. ಓಡಿ ಹೋಗಲು ದಾರಿ ಕಾಣಿಸಲಿಲ್ಲ. ಹೌದೋ? ನಾನು ತೋರಿಸುತ್ತೇನೆ" ಎಂದ ರಾಮಸಿಂಗ್ ಕಿರುನಗೆ ಬೀರುತ್ತಾ. ವಿಜಯವರ್ಮನಿಗೆ



ಆತನ ಮುಖದಲ್ಲಿ ಸ್ನೇಹಭಾವ ಕಂಡುಬಂತು. ಆತನು ತಮ್ಮ ಮಿತ್ರನೆಂದು ಸಂತೋಷಪಟ್ಟ. ರಾಮಸಿಂಗನು ಅವರಿಗೆ ಈ ಮೊದಲೇ ಭೀಮ ವರ್ಮನ ದೂತನು ಹೋದ ಮಾರ್ಗವನ್ನು ತೋರಿಸಿದ. ಗೋಡೆಯಲ್ಲಿ ಅಣಿಮಾಡಿದ್ದ ಶಿಲೆಯೊಂದನ್ನು ಸ್ವಲ್ಪ ಸರಿಸಲು ದಾರಿ ಏರ್ಪಟ್ಟಿತು. ಕೂಡಲೇ ಓಡಿಹೋಗುವಂತೆ ಅವರಿಗೆ ಸಲಹೆಕೊಟ್ಟು ರಾಮಸಿಂಗ್ ಅಲ್ಲಿಂದ ಮಾಯವಾದ.

ಕರುಣ ವಿಜಯವರ್ಮರು ಆ ದಾರಿಯಲ್ಲೇ ಹೋಗಿ ಕೋಟೆಯ ಗೋಡೆ ಸೇರಿದರು. ಅಲ್ಲಿ ಭೀಮವರ್ಮನ ದೂತನು ಇಳಿದು ಹೋದ ಕಿಟಕಿ ಇತ್ತು. ಅದರ ಸಾಲಾಕಿಗೆ ಒಂದು ಹಗ್ಗ ಕಟ್ಟಿದೆ. 'ಭೇಷ್' ಎಂದುಕೊಂಡ

ವಿಜಯವರ್ಮ. ಇಷ್ಟರಲ್ಲಿ ಹಿಂದಿನಿಂದ ಕೂಗಾಟ ಕೇಳಿಸಿತು.

"ಬಾ, ಕರುಣ. ತಡಮಾಡಿದರೆ ಮುಪ್ಪು" ಎಂದ ವಿಜಯ. ಆದರೆ ಕರುಣ ಕಿಟಕಿಯಿಂದ ಕಂದಕವನ್ನು ನೋಡಿ ಗಡಗಡನೆ ನಡುಗಿಬಿಟ್ಟಳು. ಭೀಮವರ್ಮನ ಭಟರು ಅಲ್ಲಿಗೆ ಬಂದೇಬಿಟ್ಟರು. ಏನಾದರಾಗಲೀ ಎಂದು ವಿಜಯ ಕರುಣೆಯನ್ನು ಹಿಂದೆಬಿಟ್ಟು ಹಗ್ಗದ ಸಹಾಯದಿಂದ ಹೊರಕ್ಕೆ ಹಾರಿಬಿಟ್ಟ. ಮೇಲಿಂದ ಬಾಣಗಳ ಸುರಿಮಳೆ ಆಯಿತು. ಆದರೆ ವಿಜಯವರ್ಮ ಅದಕ್ಕೆ ಲೆಕ್ಕಮಾಡದೆ ಅಗಳ್ತೆಯನ್ನು ಈಜಿ ಹೊರಗೆ ಬಂದ. ಪೊದರಿನ ಮರೆಯಲ್ಲಿ ಆತನಿಗೆ ಭಯವಿಲ್ಲದಾಯ್ತು.

ಸ್ವಲ್ಪದೂರ ಹೋಗಲು ಶಬ್ದವೇಧಿಯ ಬಾಣಕ್ಕೆ ಆಹುತಿಯಾದ ಭೀಮವರ್ಮನ ದೂತನ ಶವ ಕಾಣಿಸಿತು. ಕುತೂಹಲದಿಂದ ಆ ಶವವನ್ನು ಜಪ್ತಿಮಾಡಲು ಭೀಮವರ್ಮನು ಪ್ರತಿಪಕ್ಷದಲ್ಲಿ ಸೇರುವೆನೆಂದು ದೇವದುರ್ಗಾಧಿಪತಿಗೆ ಬರೆದ ಕಾಗದ ಸಿಕ್ಕಿತು. ಯಾವುದಕ್ಕಾದರೂ ಪ್ರಯೋಜನವಾದೀತೆಂದು ಅದನ್ನು ತನ್ನ ಕಿಸೆಯಲ್ಲಿ ಸೇರಿಸಿದ ವಿಜಯ.

ಇನ್ನಷ್ಟು ದೂರ ಹೋಗಲು ಆತನಿಗೆ ಶಬ್ದವೇಧಿಯ ದಳದವರು ಕಾಣಿಸಿದರು. ಈಸಾರಿ ಅವರೊಂದಿಗೆ ಅವರ ನಾಯಕನ ಹತ್ತಿರಹೋಗಲು ಹಿಂದೇಟು ಹಾಕಲಿಲ್ಲ ವಿಜಯವರ್ಮ. ಚಂಡಿದಾಸನೇ ಅವರ ನಾಯಕ. ಆತನು ವಿಜಯನನ್ನು ಹೃದಯಪೂರ್ವಕವಾಗಿ ಆಹ್ವಾನಿಸಿದ. ವಿಜಯವರ್ಮನಿಗೆ ಆಗ ತಿಳಿಯಿತು ಚಂಡಿದಾಸನೇ ಶಬ್ದವೇಧಿ ಎಂದು.

" ಕರುಣೆಯನ್ನು ಬಿಟ್ಟು ಬಂದಿದ್ದು ಬುದ್ಧಿವಂತಿಕೆಯಾದ ಕೆಲಸ" ಎಂದು ವಿಜಯನನ್ನು ಸಮಾಧಾನಪಡಿಸಿದ.

'ನಿನ್ನ ವಿಷಯವೆಲ್ಲಾ ತಿಳಿಯಿತು. ನಿನ್ನ ದಿನಗಳನ್ನು ಲೆಕ್ಕಮಾಡುತ್ತಿರು' ಎಂಬರ್ಥ ಬರುವ ಕಾಗದವನ್ನು ವಿಜಯವರ್ಮ ಭೀಮವರ್ಮನಿಗೆ ಬರೆದ. ಆ ಕಾಗದ ನೋಡಿ ಭೀಮವರ್ಮ ಹಲ್ಲು ಕಟಕಟ ಕಡಿದ.

[ಇನ್ನೂ ಇದೆ]






[ ಗಿರಿಕೋಟೆ ಸೇರಿಕೊಂಡ ವಿಜಯನು ಅಲ್ಲಿ ತನ್ನ ತಂದೆಯ ಮರಣದ ವೃತ್ತಾಂತವನ್ನು ತಿಳಿಯಲು ಪ್ರಯತ್ನಿಸುವನು. ಆದರೆ ಆತನ ಪ್ರಾಣಕ್ಕೆ ಸಂಚಕಾರ ಒದಗುವುದು. ಇದನ್ನು ಅರಿತ ಕರುಣ ಆತನನ್ನು ಎಚ್ಚರಿಸುವಳು. ವಿಜಯನು ಕರುಣಳನ್ನು ಅಲ್ಲಿಯೇ ಬಿಟ್ಟು ಪ್ರಾಣ ಉಳಿಸಿಕೊಂಡು ಹೊರಬೀಳುವನು. ಮುಂದೆ ಓದಿ—]

ವಿಜಯನು ಭೀಮವರ್ಮನ ಕೈಯಿಂದ ತಪ್ಪಿಸಿಕೊಂಡು ನಾಲ್ಕು ತಿಂಗಳ ಮೇಲಾಯಿತು. ಈ ನಾಲ್ಕು ತಿಂಗಳಲ್ಲಿ ವಿಜಯಲಕ್ಷ್ಮಿಯು ಬೀಸಲ್ಪೂರು, ಕೋಸಲ್ಪೂರು ರಾಜ್ಯಗಳ ನಡುವೆ ಐದಾರುಸಾರಿ ಕೈ ಬದಲಾಯಿಸಿದಳು. ಈಗ ಕೋಸಲ್ಪೂರಿನವರ ಕೈ ಮೇಲಾಗಿತ್ತು. ಆದುದರಿಂದ ಭೀಮವರ್ಮನು ತುಂಬಾ ಉಲ್ಲಾಸದಿಂದಿದ್ದನು.

ಆತನು ಕೋಸಲ್ಪೂರು ರಾಜ್ಯಕ್ಕೆ ಸೇರಿದ ಕೆಲವುಮಂದಿ ಸರದಾರರೊಂದಿಗೆ ನರ್ಮದಾ ನದಿ ತೀರದಲ್ಲಿದ್ದ ದೇವಪುರದಲ್ಲಿ ತಂಗಿದ್ದನು. ಅದೇ ದೇವಪುರಕ್ಕೆ ತುಸ ದೂರದಲ್ಲಿ ಪಾಳು ಬಿದ್ದ ಛತ್ರವೊಂದಿತ್ತು. ಅಲ್ಲಿ ಹತ್ತುಹನ್ನೆರಡು ಜನ ಧನುರ್ಧಾರಿಗಳು ತಮ್ಮ ತಮ್ಮಲ್ಲಿ ಏನೇನೋ ಮಾತಾಡಿಕೊಳ್ಳುತ್ತಿದ್ದರು. ಆಗ ಅರ್ಧರಾತ್ರಿಯ ಸಮಯವಾಗಿತ್ತು.

ಇಷ್ಟರಲ್ಲಿ ಒಬ್ಬ ದೂತನು ಬಂದು ಅವರೆಲ್ಲರ ನಡುವೆ ಕುಳಿತಿದ್ದ ಒಬ್ಬ ಯುವಕನನ್ನು ಕುರಿತು, "ವಿಜಯ, ಭೀಮವರ್ಮನು ನಾಲ್ವರು ಸೈನಿಕರೊಂದಿಗೆ ಈಗಲೇ ಎಲ್ಲಿಗೋ ಹೊರಟಿದ್ದಾನೆ" ಎಂದು ಹೇಳಿದ.

ತಕ್ಷಣ ವಿಜಯನು ತಟಕ್ಕನೆ ಎದ್ದು ನಾಲ್ಕೈದು ಜನರೊಂದಿಗೆ ಆ ದೂತನನ್ನು ಹಿಂಬಾಲಿಸಿದನು.



ಆ ದೂತನು ಅವರನ್ನು ನರ್ಮದಾ ನದೀ ತೀರದ ಅಂಚಿನಲ್ಲಿಯೇ ಕರೆದೊಯ್ಯುತ್ತಿದ್ದ. ಕೊಂಚದೂರ ಹೋದ ತರುವಾಯ ಅವರಿಗೆ ತಮ್ಮ ಮುಂದೆ ಪಂಜಿನ ಬೆಳಕಿನಲ್ಲಿ ನಡೆಯುತ್ತಿದ್ದ ಒಂದು ಸಣ್ಣ ಗುಂಪು ಕಾಣಿಸಿತು.

ಅದು ಭೀಮವರ್ಮನ ಪಕ್ಷದವರಿರಬೇಕೆಂದು ಊಹಿಸಿದರು. ಆ ಗುಂಪು ಸ್ವಲ್ಪ ದೂರ ಹೋಗಿ ನದಿಯ ದಡದಲ್ಲಿ ಪೊದೆಗಳು ದಟ್ಟವಾಗಿದ್ದ ಸ್ಥಳದಲ್ಲಿ ನಿಂತಿತು.

ವಿಜಯ ವರ್ಮನೂ ಸಹ ತನ್ನ ಅನುಚರರೊಂದಿಗೆ ಮತ್ತೊಂದುಕಡೆ ಪೊದೆಗಳ ಹಿಂದೆ ಅವಿತಿಟ್ಟುಕೊಂಡು ಮುಂದೆ ನಡೆಯುವ ಸಂಘಟನೆ ಗಳನ್ನು ನೋಡಲು ಕಾತುರನಾಗಿದ್ದನು.

ಸ್ವಲ್ಪಸಮಯ ಕಳೆದಮೇಲೆ ಪೊದೆಯ ಆಚೆ ಕಡೆಯಿಂದ ಇನ್ನೊಂದು ಗುಂಪು ಈ ಕಡೆಗೆ ಬರುತ್ತಿರುವುದು ಕಾಣಿಸಿತು. ಎರಡು ಗುಂಪಿನ ನಾಯಕರ ಮಧ್ಯೆ ಮೊದಲು ಕುಶಲ ಪ್ರಶ್ನೆಗಳಾದ ತರುವಾಯ ಏನೋ ಗಹನ ವಿಷಯಚರ್ಚಿಸುತ್ತಿರುವಂತೆ ತೋರಿತು.

ಅವರಾಡುತ್ತಿದ್ದ ಮಾತುಗಳು ಎಲ್ಲಾ ವಿಜಯನಿಗೆ ಕೇಳಿಸುತ್ತಿರಲಿಲ್ಲ. ಆದರೆ ಎಲ್ಲೋ ಕೆಲವು ಮಾತುಗಳು ಅವನ ಕಿವಿಗೆ ಬಿದ್ದವು. ‘ಕರುಣ ಎಲ್ಲ ರೀತಿಯಲ್ಲೂ ಅನುರೂಪಳಾದ ಹುಡುಗಿ... ಶಬ್ದವೇಧಿ... ಬಹಿರಂಗವಾಗಿ ಮಾಡಲು ಸಾಧ್ಯವಿಲ್ಲ...” ಮುಂತಾದ ಮಾತುಗಳು ಮಾತ್ರ ಆತನಿಗೆ ಕೇಳಿಸಿತು. ತುಸ ಹೊತ್ತಿಗೆಲ್ಲಾ ಅವರ ಚರ್ಚೆ ಮುಗಿಯಿತು. ಭೀಮವರ್ಮ ತನ್ನ ವಾಸದಕಡೆ ಹಿಂತಿರುಗಿದ. ವಿಜಯ ಆತನನ್ನು ಹಿಂಬಾಲಿಸಿದ.

ಭೀಮವರ್ಮನು ನರ್ಮದಾ ನದಿತೀರದಲ್ಲಿದ್ದ ಒಂದು ಪುರಾತನ ಭವನದಲ್ಲಿ ಇಳಿದುಕೊಂಡಿದ್ದ. ಆ ಭವನದ ಮೂರುಕಡೆಯೂ ಎತ್ತರವಾದ ಗೋಡೆಗಳಿದ್ದವು. ಮತ್ತೊಂದು ಕಡೆ ನರ್ಮದೆಯು ಪ್ರಹರಿಗೋಡೆಗಿಂತಲೂ ಭದ್ರವಾಗಿ ಆ ಭವನವನ್ನು ರಕ್ಷಿಸುತಿತ್ತು. ಆ ಭವನವನ್ನು ವಿಜಯವರ್ಮ ಅನೇಕಸಾರಿ ನೋಡಿದ್ದ; ಆದರೆ ಅದರೊಳಗೆ ಪ್ರವೇಶಿಸುವ ಅವಕಾಶ ಒದಗಿರಲಿಲ್ಲ.

ಆ ಎರಡು ಗುಂಪುಗಳಿಗೂ ನಡೆದ ಸಂಭಾಷಣೆಯಿಂದ ಕರುಣ ಈ ಭವನದಲ್ಲೇ ಇರಬೇ



ಕೆಂತಲೂ, ಆಕೆಗೆ ಬಲವಂತವಾಗಿ ವಿವಾಹ ಮಾಡುವ ಸಿದ್ಧತೆಗಳಾಗುತ್ತಿರುವುದೆಂದೂ ವಿಜಯನು ಊಹಿಸಿದ. ಕಾರ್ಯಮಿಂಚುವ ಮೊದಲೇ ತಾನು ಈ ಭವನದಮೇಲೆ ಧಾಳಿ ಮಾಡಿ, ಕರುಣಳನ್ನು ಈ ಸೆರೆಯಿಂದ ಬಿಡಿಸ ಬೇಕೆಂದು ನಿರ್ಧರಿಸಿದ.

ಆದುದರಿಂದ ಭೀಮವರ್ಮ ಮತ್ತು ಆತನ ಸೈನಿಕರು ಒಳಗೆ ಪ್ರವೇಶಿಸಿ ಸಿಂಹದ್ವಾರವನ್ನು ಮುಚ್ಚಿಕೊಂಡ. ತರುವಾಯ ಆತನು ಸುತ್ತು ಮುತ್ತು ತಿರುಗಾಡಿ ತಾನು ಧಾಳಿಮಾಡಲು ಯೋಗ್ಯವಾದ ಸ್ಥಳಕ್ಕಾಗಿ ಹುಡುಕಾಡುತ್ತಿದ್ದ.

ಕಾವಲು ಬಹಳ ಬಲವಾಗಿರುವುದರಿಂದ ಗೋಡೆ ದಾಟುವುದು ಸಾಧ್ಯವಿಲ್ಲನೆಂದೂ ನದಿಯ ಕಡೆಯಿಂದ ಧಾಳಿಮಾಡುವುದೇ ಉಚಿತವೆಂದೂ ತೀರ್ಮಾನಿಸಿ ಕೊಂಡ. ಈ ತೀರ್ಮಾನಕ್ಕೆ ಬಂದಮೇಲೆ ಸ್ವಲ್ಪವೂ ತಡಮಾಡದೆ ತನ್ನ ಅನುಚರರೊಂದಿಗೆ ತಾನು ಇಳಿದಿದ್ದ ಛತ್ರದಕಡೆಗೆ ಹೊರಟ.

ಆದರೆ ಅವರು ತಮ್ಮ ನಿವಾಸದೆಡೆ ಹೋಗುತ್ತಿರುವಾಗ ಕೆಲವರು ಅವರನ್ನು ಅಡ್ಡಗಟ್ಟಿದರು. ಭೀಮವರ್ಮನ ಪಕ್ಷದವರಿರಬೇಕೆಂದು ವಿಜಯನಕಡೆಯವರು ಭಾವಿಸಿದರು. ಕತ್ತಿಗಳನ್ನು ಹೊರತೆಗೆದು ಶತ್ರುಗಳಮೇಲೆ ಬಿದ್ದರು. ಈ ರೀತಿ ಉಭಯಪಕ್ಷದವರಿಗೂ ಸ್ವಲ್ಪಹೊತ್ತು ಕದನವಾದ ತರುವಾಯ ಅಕಸ್ಮಾತ್ತಾಗಿ ಅವರಿಗೆ ತಮ್ಮ ತಪ್ಪು ತಿಳಿಯಿತು.

ತನ್ನ ಎದುರಾಳಿ ಕರುಣಳನ್ನು ಸಾಕಿ ಸಲಹಿ ದೊಡ್ಡವಳನ್ನಾಗಿ ಮಾಡಿದ ಚಂದ್ರದುರ್ಗಾಧಿಪತಿ ಎಂದು ವಿಜಯನಿಗೆ ಆಗ ತಿಳಿಯಿತು. ಇಬ್ಬರಿಗೂ ಭೀಮವರ್ಮನೆಂದರೆ ಆಗದು. ಆದುದರಿಂದ ಇಬ್ಬರಲ್ಲೂ ಒಂದು ರೀತಿ ಸೌಹಾರ್ದ್ರವೇರ್ಪಟ್ಟಿತು.

ಮಾರನೇಯದಿನ ಎಲ್ಲ ವಿಷಯಗಳನ್ನೂ ವಿಶದವಾಗಿ ಚರ್ಚಿಸಿ ಕಾರ್ಯರೂಪಕ್ಕೆ ಬರೋಣವೆಂದು ಅವರು ತೀರ್ಮಾನಿಸಿ, ತಮ್ಮ ತಮ್ಮ ಶಿಬಿರದಕಡೆ ಹೊರಟು ಹೋದರು.

ಮಾರನೇಯದಿನ ಬೆಳಗ್ಗೆ ನರ್ಮದಾನದಿ ತೀರದಲ್ಲಿ ವಿಜಯನೂ ಚಂದ್ರದುರ್ಗಾಧಿಪತಿಯೂ ಭೇಟಿಮಾಡಿದರು. ಇಬ್ಬರಿಗೂ



ಬೀಮವರ್ಮನು ಶತ್ರುವಾಗಿದ್ದನು. ಆದುದರಿಂದ ಅವರಿಬ್ಬರಲ್ಲಿ ನಿಕಟಸ್ನೇಹ ಕುದುರಲು ಕಷ್ಟವೇನಿಲ್ಲ. ಚಂದ್ರದುರ್ಗಾಧಿಪತಿಗೆ ವಿಜಯನಲ್ಲಿ ಅನುರಾಗ ಮತ್ತು ವಿಶ್ವಾಸಗಳು ಉಂಟಾಯಿತು.

ಇಬ್ಬರೂ ಸೇರಿ ಕರುಣಳನ್ನು ರಕ್ಷಿಸುವ ಉಪಾಯಗಳನ್ನು ಯೋಚಿಸಿದರು. ಕೊನೆಗೆ ಅಂದುರಾತ್ರಿಯೇ ನದಿಯ ಕಡೆಯಿಂದ ಭೀಮವರ್ಮನ ನಿವಾಸವನ್ನು ಮುತ್ತಲು ನಿರ್ಧರಿಸಿದರು. ಕರುಣಳನ್ನು ವಿಜಯನಿಗೆ ಕೊಟ್ಟು ವಿವಾಹಮಾಡಲು ಯಾವ ಅಭ್ಯಂತರವೂ ಇಲ್ಲವೆಂದು ಚಂದ್ರದುರ್ಗಾಧಿಪತಿ ಹೇಳಿದ.

ವಿಜಯನ ಪಡೆಯಲ್ಲಿ ಅಂಬಿಗ ಅಣ್ಣಯ್ಯನೆಂಬ ಮಧ್ಯವಯಸ್ಸಿನ ವ್ಯಕ್ತಿಯಿದ್ದ. ಅಣ್ಣಯ್ಯ ಹಡಗು ನಡೆಸುವುದರಲ್ಲಿ ತುಂಬಾ ಅನುಭವಸ್ಥ.

ವಿಜಯನು ತನ್ನ ನಿವಾಸಕ್ಕೆ ಬಂದು, ಅಣ್ಣಯ್ಯನನ್ನು ಕುರಿತು "ಅಣ್ಣಯ್ಯಾ ಇಂದುರಾತ್ರಿ ಎಲ್ಲಿಂದಲಾದರೂ ಒಂದು ದೊಡ್ಡ ಹಡಗನ್ನು ಅಪಹರಿಸಬೇಕು. ತುಸ ತುರ್ತು ಕಾರ್ಯವಿದೆ" ಎಂದ. ಅದಕ್ಕೆ "ಓ, ಅದೆಷ್ಟರಕೆಲಸ. ರೇವಿನಲ್ಲಿರುವ ಹಡಗುಗಳೆಲ್ಲಾ ನಮ್ಮದೆ" ಎಂದ ಅಣ್ಣಯ್ಯ.

ರೇವಿನಲ್ಲಿ ಅನೇಕ ಹಡಗುಗಳಿದ್ದವು. ಅವುಗಳಲ್ಲಿ ಒಂದೇ ಒಂದು ಹಡಗು ಇವರಕಾರ್ಯಕ್ಕೆ ಅನುಕೂಲವಾಗಿ ತೋರಿಬಂತು. ಅಣ್ಣಯ್ಯ ಈ ವಿಚಾರ ವಿಜಯನಿಗೆ ತಿಳಿಸಿದ. ಕತ್ತಲಾಗುವವೇಳೆಗೆ ಚಂದ್ರದುರ್ಗಾಧಿಪತಿ ತನ್ನ ಅನುಚರರೊಂದಿಗೆ ಅಲ್ಲಿಗೆಬಂದ. ವಿಜಯನೂ ಸಹ ತನ್ನ ಜನರೊಂದಿಗೆ ಸಿದ್ಧವಾದ.

ಮೊದಲು ಐದಾರುಜನ ಶಬ್ದಮಾಡದೆ ತೆವಳಿಕೊಂಡು ಹೋಗಿ ಹಡಗವನ್ನು ಹತ್ತಿದರು. ಅಲ್ಲಿ ಇಬ್ಬರು ಪಹರೆಯವರು ಕಾವಲು ಕಾಯುತ್ತಿದ್ದರು. ಅವರ ಬಾಯಲ್ಲಿ ಬಟ್ಟೆ ತುರುಕಿ, ಕೈಕಾಲುಗಳನ್ನುಕಟ್ಟಿ ಅವರನ್ನು ಎಲ್ಲಿಯೋ ದೂರದೆಡೆಗೆ ಸಾಗಿಸಿದರು ವಿಜಯನಕಡೆಯ ವೀರರು. ತರುವಾಯ ಚಂದ್ರದುರ್ಗಾಧಿಪತಿ ಮತ್ತು ವಿಜಯನ ಪರಿವಾರ ಬೇಗಬೇಗನೆ ಹಡಗು ಹತ್ತಿದರು. ಅಣ್ಣಯ್ಯ ಚುಕ್ಕಾಣಿ ಹಿಡಿದ. ಹಡಗು ಶರವೇಗದಿಂದ ನಡೆಯುತಿತ್ತು.

“ಮೋಡಕವಿಯುತ್ತಿದೆ. ಶುಭಸೂಚನೆಗಳೇನೂ ಕಾಣಿಸುತ್ತಿಲ್ಲ” ಎಂದ ಆಕಾಶದಕಡೆ ನೋಡುತ್ತಾ ಅಣ್ಣಯ್ಯ. “ಹೌದು. ಬಿರುಗಾಳಿ ಬೀಸುವಂತಿದೆ. ನಾವು ಹೊರಟ ಮುಹೂರ್ತ ಪ್ರಶಸ್ತವಾದುದಲ್ಲ ವೇನೋ” ಎಂದು ಅನುಮಾನ ಸೂಚಿಸಿದ ಚಂದ್ರದುರ್ಗಾಧಿಪತಿ. “ಏನಾಗುವುದೋ ನೋಡೋಣಬಿಡಿ” ಎಂದ ವಿಜಯ. ತುಫಾನು ಬಂದರೂ ಸರಿ, ಭೂಕಂಪವಾದರೂ ಸರಿ, ಹೇಗಾದರೂಮಾಡಿ ಕೈದಿಗಳನ್ನು ಸೆರೆಯಿಂದ ಇಂದು ಬಿಡಿಸಲೇಬೇಕೆಂದು ನಿರ್ಧರಿಸಿಬಿಟ್ಟಿದ್ದ ವಿಜಯ.



ಕ್ಷಣಕ್ಷಣಕ್ಕೂ ಕತ್ತಲೂ ತೀವ್ರವಾಗುತ್ತಿದೆ. ಹಡಗು ಭೀಮವರ್ಮನ ನಿವಾಸದ ಸಮೀಪಕ್ಕೆ ಬರುವ ವೇಳೆಗೆ ಗಾಢಾಂಧಕಾರ ಆವರಿಸಿದೆ. ಸುತ್ತಮುತ್ತ ಪ್ರಶಾಂತತೆ ನೆಲಸಿತ್ತು. “ಇನ್ನೇನು ಬಂದೇಬಿಟ್ಟೆವು” ಎಂದ ವಿಜಯ. ಹಡಗು ಯಾವಾಗ ದಡವನ್ನುಮುಟ್ಟುವುದೋ ಯಾವಾಗ ಇಳಿಯೋಣವೋ ಎಂದು ವಿಜಯ ತಹತಹ ಪಡುತ್ತಿದ್ದ.

ಹೇಗಾದರೇನು? ಹಡಗು ಭವನದ ಹತ್ತಿರವಿರುವ ದಡವನ್ನುಸೇರಿತು. ವಿಜಯ ಮೊದಲು ಹಡಗಿನಿಂದ ಕೆಳಕ್ಕೆ ಹಾರಿದ. ಆತನ ಹಿಂದೆ ಇನ್ನೂ ಕೆಲವರು ಹಡಗಿನಿಂದ ಇಳಿದರು. “ಉಳಿದವರು ಹಡಗಿನಲ್ಲೇ ಇರಿ. ನಾವು ಹೋಗಿ ಸ್ಥಿತಿಗಳನ್ನು ತಿಳಿದುಕೊಂಡು ಬರುತ್ತೇವೆ” ಎಂದ ಚಂದ್ರದುರ್ಗಾಧಿಪತಿ.

ಮತ್ತೆ ಇತರರು ಹಡಗಿನಲ್ಲೇ ಉಳಿದಿದ್ದರು. ಆಗಲೇ ಮೋಡಗಳು ಹೆಪ್ಪುಗಟ್ಟಿದಂತಾಯಿತು. ನಕ್ಷತ್ರಗಳು ಕಣ್ಣಿಗೆ ಕಾಣಿಸದಾದವು. ಆಕಸ್ಮಾತ್ತಾಗಿ ಬಿರುಗಾಳಿ ಎದ್ದಿತು. ವಿಜಯವರ್ಮನು ತನ್ನ ಪರಿವಾರದೊಂದಿಗೆ ಜಾಗರೂಕತೆಯಿಂದ ಮುಂದೆ ಸಾಗುತ್ತಿದ್ದ. ಭವನದ ಹಿಂಭಾಗವಾದುದರಿಂದ ಬಹಳ ಜನ ಸೈನಿಕರಿರಲಾರರೆಂದು ವಿಜಯನು ಭಾವಿಸಿದ್ದ.

ಇಷ್ಟರಲ್ಲಿ ಆತನ ಪರಿವಾರದವರಲ್ಲೊಬ್ಬನು ದುರದೃಷ್ಟವಶಾತ್ ಒಂದು ಬಂಡೆಯಮೇಲೆ ಬೀಳಲು, ಅದು ಉರುಳುತ್ತಾಹೋಗಿ ಕೆಳಗೆ ಬಿತ್ತು.

ತತ್‌ಕ್ಷಣ ಭವನದ ಗೋಡೆಯಮೇಲಿಂದ ಒಂದು ಬಾಣ ರಿವ್ವನೆ ಬಂದು ಒಬ್ಬನ



ಪ್ರಾಣವನ್ನು ಬಲಿಗೊಂಡಿತು. "ಹಿಂದೆ ಸರಿಯಿರಿ" ಎಂದು ವಿಜಯನು ಆಜ್ಞಾಪಿಸುವಷ್ಟರಲ್ಲಿ ಬಾಣಗಳ ಸುರಿಮಳೆಯಾಯಿತು. ಆತನ ಅನುಚರರು ಹಿಂದೋಡಿದರು.

ಇಷ್ಟರಲ್ಲಿ ಮಳೆ ಭೋರೆಂದು ಸುರಿಯಿತು. ತುಫಾನಿನ ಶಬ್ದ, ಹಿಂದಿರುಗಿ ಓಡುತ್ತಿದ್ದವರ ಕಿರಿಚಾಟ, ಅಟ್ಟಿಕೊಂಡು ಬರುತ್ತಿರುವವರ ಅರಚಾಟಗಳು ಸೇರಿ ಸನ್ನಿವೇಶ ತುಂಬಾ ಕೋಲಾಹಲಕರವಾಗಿತ್ತು.

ಹಾಗೂ ಹೀಗೂ ಮಾಡಿ ವಿಜಯ ಮತ್ತು ಆತನ ಪರಿವಾರ ತಾವು ಹಡಗು ನಿಲ್ಲಿಸಿದ್ದ ಸ್ಥಳವನ್ನು ಸಮೀಪಿಸಿದರು.

ಆದರೆ ಅಲ್ಲಿ ಹಡಗಿರಲಿಲ್ಲ. ಬಿರುಗಾಳಿಯ ದೆಸೆಯಿಂದ ಅದು ನದಿಯ ಮಧ್ಯಕ್ಕೆ ಹೊಡೆದುಕೊಂಡು ಹೋಗಿಬಿಟ್ಟಿತ್ತು. ಅದನ್ನು ಮತ್ತೆ ದಡವನ್ನು ಸೇರಿಸಲು ಅಣ್ಣಯ್ಯನಿಗೆ ಸಾಧ್ಯವಾಗುತ್ತಿಲ್ಲ!

ಹಿಂದಿನಿಂದ ಶತ್ರುಗಳು ಅಟ್ಟಿಸಿಕೊಂಡು ಬರುತ್ತಿದ್ದಾರೆ. ಧಾರಾಕಾರವಾಗಿ ಮಳೆ ಸುರಿಯುತ್ತಿದೆ. ಬಿರುಗಾಳಿಯ ದೆಸೆಯಿಂದ ಒಂದು ಕಡೆ ನಿಲ್ಲಲು ಸಾಧ್ಯವಾಗುತ್ತಿಲ್ಲ. ಮಿಂಚಿನ ಪ್ರಕಾಶದಿಂದ ಶತ್ರುಗಳಿಗೆ ಗುರಿ ಬಹಳ ಚೆನ್ನಾಗಿ ಸಿಗುತ್ತಿದೆ.

ಆಲೋಚಿಸಲಾದರೂ ಅವರಿಗೆ ವ್ಯವಧಿಯಿರಲಿಲ್ಲ. ವಿಜಯ ಮತ್ತು ಆತನ ಪರಿವಾರ ಗಟ್ಟಿಮನಸ್ಸಿನಿಂದ ಸಾಹಸಕ್ಕೆ ಧುಮುಕಿದರು. ನಿರ್ಭಯವಾಗಿ ನದಿಯಲ್ಲಿ ಹಾರಿದರು. ಹಡಗಿರುವ ಸ್ಥಳಕ್ಕೆ ಈಜಿಕೊಂಡು ಹೊರಟರು.

ಶತ್ರುಗಳು ದಡಕ್ಕೆ ಬಂದು ಈಜಿಕೊಂಡು ಹೋಗುತ್ತಿರುವವರ ಮೇಲೆ ಸಾಲು ಸಾಲಾಗಿ ಬಾಣಗಳನ್ನು ಬಿಡುತ್ತಿದ್ದರು. ಏಟು ತಿಂದವರು 'ಹಾ' ಎಂದು ಕಿರಿಚುತ್ತಾ ಪ್ರವಾಹದ ಪಾಲಾಗುತ್ತಿದ್ದರು. ಹಡಗನ್ನೇರುತ್ತಿರುವಾಗ ಶತ್ರುಗಳ ಬಾಣಕ್ಕೆ ತುತ್ತಾಗಿ ಅನೇಕರು ನದಿಯಲ್ಲಿ ಬಿದ್ದು ಕೊಚ್ಚಿಕೊಂಡು ಹೋದರು.

ಹಡಗಿನಲ್ಲಿದ್ದವರಲ್ಲಿ ಕೆಲವರಿಗೆ ಏಟು ತಾಕಿತು. ಆದರೂ ಸಹ ಅವರು ಧೈರ್ಯಗೆಡದೆ ತಮ್ಮ ಎದುರಾಳಿಗಳ ಮೇಲೆ ಬಾಣಗಳನ್ನು ಬಿಡಲು ಪ್ರಾರಂಭಿಸಿದರು. ನಿಕರ ಯುದ್ಧ ನಡೆಯಿತು. ಅಂತೂ ಭೀಮಸರ್ಮನ ಕಡೆಯವರದು ಮೇಲುಗೈ ಆಗಿತ್ತು.



ವಿಜಯವರ್ಮನಪಾಳಿ ಈರೀತಿ ಪರಿಣಾಮಗೊಂಡಿತು. ಪ್ರಾಣವುಳಿಸಿಕೊಂಡರೆ ಸಾಕೆಂದು ದೇವರಿಗೆ ಹರಿಕೆ ಹೊತ್ತರು. ತುಫಾನಿನ ಹೊಡೆತಕ್ಕೆ ಹಡಗು ತರಗೆಲೆಯಂತೆ ಅತ್ತಿತ್ತ ತೂಗಾಡುತ್ತಿತ್ತು. ಈ ಕ್ಷಣವೋ, ಮರುಕ್ಷಣವೋ, ತಲೆಕೆಳಗಾಗುವಂತೆ ತೋರುತ್ತಿತ್ತು. ಹಡಗಿನಲ್ಲಿ ಹಾಹಾಕಾರವೆದ್ದಿತು.

"ಹಡಗನ್ನು ಆಚೆದಡಕ್ಕಾದರೂ ಸೇರಿಸಯ್ಯಾ ಅಣ್ಣಯ್ಯಾ" ಎಂದು ಉದ್ವಿಗ್ನನಾಗಿ ನುಡಿದ ವಿಜಯ. ಆದರೆ ಆ ಬಿರುಗಾಳಿಯಲ್ಲಿ ಹಡಗನ್ನು ಆಚೆದಡಕ್ಕೆ ಸೇರಿಸುವುದೇನು ಸಾಮಾನ್ಯವೇ?

ಇಷ್ಟರಲ್ಲಿ ಒಂದುಬಾಣ ಬಂದು ಚಂದ್ರದುರ್ಗಾಧಿಪತಿಗೆ ತಗುಲಿತು. ಗಾಯಗೊಂಡು ಕೆಳಗೆಬಿದ್ದಾತನನ್ನು ಒಳಗೆ ಹೊತ್ತುಕೊಂಡು ಹೋದರು.

ಗಾಯ ಜೋರಾಗಿಯೇ ಬಿದ್ದಿತ್ತು. ಪ್ರಾಣಭಯವೂ ಇದ್ದುದರಿಂದ ಆತನು ವಿಜಯನನ್ನು ಕೂಗಿದ. ವಿಜಯ ಚಿಂತಾಕ್ರಾಂತನಾಗಿ ಆತನನ್ನು ಸಮೀಪಿಸಿ ನಿಂತುಕೊಂಡ.

"ತಮ್ಮಾ, ನೀನು ಯಾವಪಕ್ಷದವನು? ಬಿಸಲ್ಪೂರೊ, ಅಥವಾ ಕೊಸಲ್ಪೂರೊ?" ಎಂದು ಕೇಳಿದ ಚಂದ್ರದುರ್ಗಾಧಿಪತಿ.

"ಭೀಮವರ್ಮ ಕೊಸಲ್ಪೂರಿನವನು. ಆತನು ಚಂಡಿದಾಸ ಮತ್ತು ನನಗೆ ಹಿತಶತ್ರು. ಆದುದರಿಂದ ನಾವು ಬಿಸಲ್ಪೂರಿನವರೆಂದು ನೀವು ತಿಳಿಯಬಹುದು" ಎಂದ ವಿಜಯ.



ತಾನು ಇಂತಹ ದೇ ಪಕ್ಷಕ್ಕೆ ಸೇರಿದವನೆಂಬ ವಿಷಯ ವಿಜಯ ವರ್ಮನಿಗೆ ನಿರ್ದಿಷ್ಟವಾಗಿ ತಿಳಿಯದು!

"ಹಾಗಾದರೆ ಕೇಳು. ನಾನು ಕರುಣಾಳಿಗಾಗಿ ಇಲ್ಲಿಗೆ ಬರಲಿಲ್ಲ. ಅವಳು ಇಲ್ಲಿರುವುದೂ ಸಹ ನನಗೆ ತಿಳಿಯದು. ಶತ್ರುಗಳ ಬಲಾಬಲಗಳನ್ನು ತಿಳಿದುಕೊಂಡು ಹೋಗುವ ಸಲುವಾಗಿ ಬಂದೆ. ಆ ಕೆಲಸ ಸ್ವಲ್ಪಮಟ್ಟಿಗೆ ನೆರವೇರಿತು. ನಾನು ಪ್ರಾಣದಿಂದ ಉಳಿಯುವೆನೇ ಎಂಬ ಅನುಮಾನ ವುಂಟಾಗಿದೆ. ನಾನು ನಿನಗೊಬ್ಬ ವ್ಯಕ್ತಿಯ ಹೆಸರನ್ನು ಹೇಳುವೆನು. ನಾನು ಮರಣಿಸಿದಪಕ್ಷಕ್ಕೆ ನೀನು ಆ ವ್ಯಕ್ತಿಯ ಹತ್ತಿರ ಹೋಗಿ ಇಲ್ಲಿನ ಸ್ಥಿತಿಗತಿಗಳನ್ನು ತಿಳಿಸಬೇಕು. ಆತನು ನಿನಗೆ ಬಿಸಲ್ಪೂರು

ರಾಜನ ಪರಿಚಯಮಾಡಿಸಿ ಕೊಡುತ್ತಾನೆ. ನಿನ್ನ ಅದೃಷ್ಟ ಹೇಗಿರುವುದೋ ಯಾರು ಹೇಳಬಲ್ಲರು ?" ಎಂದ ಚಂದ್ರದುರ್ಗಾಧಿಪತಿ. ಇಷ್ಟು ಹೇಳುವಾಗ ಅವನಿಗೆತುಂಬಾ ಆಯಾಸವಾಗಿ ಹೋಗಿತ್ತು.

"ಮತ್ತೆ ಕರುಣಳ ವಿಷಯವೇನು ?" ಎಂದು ಕೇಳಿದ ವಿಜಯ.

"ಆ ವಿಷಯ ನಾನೇನೂ ಹೇಳುವಂತಿಲ್ಲ. ನೀನೇ ಪ್ರಯತ್ನಪಡಬೇಕು ಅಷ್ಟೇ. ನನ್ನ ಕೈಲಾದುದನ್ನು ಇದುವರೆವಿಗೂ ಮಾಡಿದೆ.... ಇನ್ನುಮೇಲೆ ನನ್ನಿಂದ ಏನೂ ಸಾಧ್ಯವಾಗಲಾರದು....ಬದುಕಲಾರೆ ." ನಿರಾಶೆಯಡಗಿತ್ತು ಆ ಮಾತುಗಳಲ್ಲಿ.

"ನೀವೇನೂ ನಿರಾಶೆಪಡಬೇಡಿ. ಶತ್ರುಗಳ ಕಾಟದಿಂದ ಪಾರಾದೆವು. ಹಡಗು ಇನ್ನೇನು ದಡಸೇರುವುದು ; ನಿಮ್ಮ ಗಾಯಗುಣವಾಗುವುದು" ಎಂದು ವಿಜಯ ಧೈರ್ಯಹೇಳಿದ.

"ಯಾವುದು ಹೇಗಾದರೂ ಇನ್ನು ನಾನೇನೂ ಮಾಡುವಂತಿಲ್ಲ. ನನ್ನ ಚಿಂತೆಮಾತ್ರ ದೂರವಾಯಿತು" ಎಂದ ಚಂದ್ರದುರ್ಗಾಧಿಪತಿ. ಅವರು ಸ್ವಲ್ಪ ಹೊತ್ತಿಗೆಲ್ಲಾ ದಡವನ್ನು ತಲುಪಿದರು. ಆಗ ತಾನೇ ಸೂರ್ಯೋದಯವಾಗುತಿತ್ತು.

ವಿಜಯ ಮತ್ತು ಆತನ ಪರಿವಾರ ಹಡಗನ್ನು ರೇವಿನಲ್ಲಿ ಕಟ್ಟಿದರು. ಭಿನ್ನ ಹೃದಯರಾಗಿ ಹಡಗಿನಿಂದ ಇಳಿದರು. ಚಂದ್ರದುರ್ಗಾಧಿಪತಿಯ ಅನುಚರರು ಗಾಯ ಹೊಂದಿದ ತಮ್ಮ ಯಜಮಾನನನ್ನು ಹೊತ್ತುಕೊಂಡು ಅವರ ಶಿಬಿರಕ್ಕೆ ಹೋದರು.

ಆ ರಾತ್ರಿ ಕರುಣಳನ್ನು ಬಿಡಿಸಲು ಮಾಡಿದ ಪ್ರಯತ್ನ ಈ ರೀತಿ ನಿಷ್ಫಲವಾಯಿತು.

ಆದರೆ ವಿಜಯನಿಗೆ ಈ ಪ್ರಯತ್ನದಿಂದ ಚಂದ್ರದುರ್ಗಾಧಿಪತಿಯ ಸ್ನೇಹ ಲಭಿಸಿತು. "ಮತ್ತೊಬ್ಬರ ಸಹಾಯಕ್ಕೆ ಕಾದುನೋಡದೆ ಹೇಗಾದರೂ ಮಾಡಿ ಕರುಣಳನ್ನು ಉಳಿಸಬೇಕು. ನನ್ನ ಶಕ್ತಿಯಮೇಲೆ ಆಧಾರ ಪಡಬೇಕು" ಎಂದು ನಿಶ್ಚಯಿಸಿದ ವಿಜಯ.

[ಇನ್ನೂ ಇದೆ]






[ಭೀಮವರ್ಮನು ಬಿಡಾರ ಹಾಕಿದ್ದ ದೇವಪುರದಲ್ಲಿ ಕರುಣಳನ್ನು ಬಲವಂತವಾಗಿ ಯಾರಿಗೋ ಕೊಟ್ಟು ವಿವಾಹ ಮಾಡಲು ನಿಶ್ಚಯಿಸಿದ್ದ. ಈ ರಹಸ್ಯ ಕೇಳಿದ ವಿಜಯವರ್ಮ ಚಂದ್ರದುರ್ಗಾಧಿಪತಿಯೊಂದಿಗೆ ಸೇರಿ ಭೀಮವರ್ಮನು ವಾಸಮಾಡುತ್ತಿದ್ದ ಭವನದಮೇಲೆ ಧಾಳಿಮಾಡಿದ. ಆದರೆ ಆ ಧಾಳಿ ವಿಫಲ ವಾಯಿತು. ಚಂದ್ರದುರ್ಗಾಧಿಪತಿ ಗಾಯಗೊಂಡ. ವಿಜಯವರ್ಮ ಮತ್ತೆ ತನ್ನ ನಿವಾಸ ಸೇರಿದ.]

ವಿಜಯವರ್ಮನು ತನ್ನ ಅನುಚರರೆಲ್ಲರನ್ನೂ ಆ ಪಾಳುಬಿದ್ದಿದ್ದ ಸತ್ರದಲ್ಲಿ ಗುಂಪು ಸೇರಿಸಿದ. ಅವರೆಲ್ಲ ಕರುಣಳನ್ನು ಭೀಮವರ್ಮನ ಸೆರೆಯಿಂದ ಬಿಡಿಸುವ ಮಾರ್ಗವನ್ನು ಯೋಚಿಸುತ್ತಿದ್ದರು.

ಭೀಮವರ್ಮನು ಕರುಣಳನ್ನು ಯಾರಿಗೋ ಕೊಟ್ಟು ರಹಸ್ಯವಾಗಿ ವಿವಾಹ ಮಾಡಲಿರುವನೆಂಬ ವಿಷಯ ಅವರಿಗೆ ತಿಳಿದಿದೆ. ಈ ಬಲವಂತದ ಮದುವೆಯನ್ನು ಒಪ್ಪುತ್ತಿರುವವನು ಯಾರು? ಎಂಬುದು ಅವರಿಗೆ ತಿಳಿಯದು. "ಅವನು ಯಾರೋ ತಿಳಿದುಕೊಳ್ಳಬೇಕಾದರೆ ನಾವಿಲ್ಲಿ ಕುಳಿತು ಚರ್ಚಿಸುವುದರಿಂದ ಪ್ರಯೋಜನವಿಲ್ಲ. ಸೀದಾ ಭೀಮವರ್ಮನು ತಂಗಿರುವ ಭವನಕ್ಕೆ ಹೋಗಬೇಕು. ಅದರ ಹೊರತು ಬೇರೇ ಮಾರ್ಗವೇ ಇಲ್ಲ" ಎಂದ ಅಂಬಿಗ ಅಣ್ಣಯ್ಯ.

"ಭೇಷ್, ಭೇಷ್, ಅಣ್ಣಯ್ಯಾ ನೀನು ಬೃಹಸ್ಪತಿ ಕಣಯ್ಯಾ" ಎಂದ ಅವರಲ್ಲೊಬ್ಬ.

"ಸೊಗಸಾಗಿದೆ ಯೋಚನೆ. ಆದರೆ ಬೆಕ್ಕಿಗೆ ಗಂಟೆ ಕಟ್ಟುವವರು ಯಾರು?" ಎಂದ ವಿಜಯವರ್ಮ.

"ಇನ್ನು ಯಾರು, ನಾವಿಬ್ಬರೇ. ನಡೀ ಹೋಗೋಣ" ಎಂದು ಎದ್ದು ನಿಂತ ಅಂಬಿಗ ಅಣ್ಣಯ್ಯ.



ವಿಜಯವರ್ಮನು ತನ್ನ ಅನುಚರರಿಗೆ ಜಾಗ್ರತೆಯಾಗಿ ನಡೆದುಕೊಳ್ಳುವಂತೆ ಎಚ್ಚರಿಕೆ ಕೊಟ್ಟು ಅಣ್ಣಯ್ಯನೊಂದಿಗೆ ಹೊರಟ. ಅಣ್ಣಯ್ಯ ನೆಟ್ಟಗೆ ಒಂದು ಅರಣ್ಯದ ಹಾದಿ ಹಿಡಿದ. ಸ್ವಲ್ಪದೂರ ಕಾಲು ಹಾದಿಯಲ್ಲಿ ಹೋದ ಮೇಲೆ ಅಣ್ಣಯ್ಯ ಆ ದಾರಿ ತಪ್ಪಿಸಿ, ವಿಜಯವರ್ಮನನ್ನು ದಟ್ಟವಾಗಿ ಹಬ್ಬಿದ್ದ ಗಿಡಗಳ ಮಧ್ಯೆ ಕರೆದುಕೊಂಡು ಹೋದ.

ನಡು ಹಗಲಲ್ಲೇ ಗಾಢಾಂಧಕಾರವಾಗಿದ್ದ ಆ ಮರಗಳ ಮಧ್ಯೆ ಇದ್ದ ತನ್ನ ನಿವಾಸವನ್ನು ಅಣ್ಣಯ್ಯ ವಿಜಯವರ್ಮನಿಗೆ ತೋರಿಸಿದ. ಒತ್ತೊತ್ತಾಗಿ ಹೊಸೆದುಕೊಂಡಿರುವ ಕಾಡು ಬಳ್ಳಿಗಳ ನಡುವೆ ಕೆಲವು ಒಣಗಿದ ಕೊಂಬೆಗಳನ್ನು ನೆಟ್ಟು, ಅವುಗಳಮೇಲೆ ಚಾಪೆಯನ್ನು ಹರಡಿ ಒಂದು ಸಣ್ಣ ಕೊಠಡಿಯನ್ನು ಸಿದ್ಧಪಡಿಸಿದ ಅಣ್ಣಯ್ಯ.

"ಇದೇ ನನ್ನಮನೆ. ಚೆನ್ನಾಗಿದೆಯೆ?" ಎಂದು ಕೇಳಿದ ವಿಜಯವರ್ಮನನ್ನು.

"ನಾನು ನಿನ್ನ ಮನೆಯನ್ನು ನೋಡಲಿಕ್ಕೆ ಬರಲಿಲ್ಲ. ಕರುಣಳನ್ನು ಬಿಡಿಸುವ ಮಾರ್ಗ ಯೋಚಿಸಬೇಕು. ನೀನು ಯೋಚಿಸಿರುವ ಉಪಾಯವೇನೋ ಮೊದಲು ಹೇಳು" ಎಂದು ಗಂಭೀರವಾಗಿ ನುಡಿದ. ಅಣ್ಣಯ್ಯ ನಗುತ್ತಾ ಕೆಳಗೆಬಿದ್ದಿದ್ದ ಹರಕು ಚಾಪೆಗಳಡಿಯಿಂದ ಕೆಲವು ಹಳೇಬಟ್ಟೆಗಳನ್ನು ಹೊರತೆಗೆದ.

ಅನುಮಾನದಿಂದ ನೋಡುತ್ತಿದ್ದ ವಿಜಯನಿಗೆ ಅವುಗಳನ್ನು ತೋರಿಸಿ "ನಾವು ಭೀಮವರ್ಮನ ಭವನದೊಳಕ್ಕೆ ಹೋಗಬೇಕೆಂದರೆ ಮಾರು ವೇಷದಿಂದಲೇ ಹೋಗಬೇಕು. ಸನ್ಯಾಸಿಯ ವೇಷ ತುಂಬಾ ಸುಲಭವಾಗಿರುತ್ತದೆ. ನಮಗೆ ಬೇಕಾದ ಜಾಗಕ್ಕೆ ಹೋಗಲು ಆ ವೇಷ ಸಹಾಯಕರವಾಗಿರುತ್ತದೆ" ಎಂದ ಅಣ್ಣಯ್ಯ.

ಈ ಉಪಾಯ ವಿಜಯವರ್ಮನಿಗೆ ಸರಿ ತೋರಿತು. ಅಣ್ಣಯ್ಯ ತನ್ನ ವೇಷವನ್ನು ನಿಮಿಷಮಾತ್ರದಲ್ಲಿ ಬದಲಾಯಿಸಿದ. ಕಾಷಾಯ ವಸ್ತ್ರಧರಿಸಿ, ಕೊರಳಲ್ಲಿ ರುದ್ರಾಕ್ಷಿ ಸರ, ಕೈಯಲ್ಲಿ ಕಮಂಡಲು ಹಿಡಿದಿದ್ದ ಅಣ್ಣಯ್ಯನನ್ನು ನೋಡಿದರೆ ಈಗಲೇ ಆತನು ಹಿಮಾಲಯದಿಂದ ಬಂದ ಯತೀಶ್ವರನಂತೆ ಕಾಣುತ್ತಿದ್ದ.

ವಿಜಯನಿಗೂ ಸನ್ಯಾಸಿಯ ವೇಷ ಸರಿ ಹೋಯಿತು. ಸನ್ಯಾಸಿಯ ವೇಷದಲ್ಲಿದ್ದ ಅವ ರಿಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡು ನಸು ನಕ್ಕರು.

" ಜೈಸೀತಾ ರಾಂ " ಎಂದ ಅಣ್ಣಯ್ಯ. "ಜೈ ಸೀತಾ ರಾಂ" ಪುನರುಚ್ಚರಿಸಿದ ವಿಜಯ.

" ಯಾವುದಕ್ಕಾದರೂ ಒಳ್ಳೆಯದು. ಈ 'ಜೈ ಸೀತಾ ರಾಂ' ನೊಂದಿಗೆ ಇನ್ನೊಂದೆರಡು ವಾಕ್ಯಗಳನ್ನು ನೆನಪಿನಲ್ಲಿಟ್ಟುಕೊ. 'ಅಲಕ್ ನಿರಂಜರ್', 'ಸರ್ವಂ ಕಲ್ಮಷಂ ಬ್ರಹಂ' ಎಂದ ಅಣ್ಣಯ್ಯ.

ಅಂಬಿಗ ಅಣ್ಣಯ್ಯನ ಅಮಾಯಕತ್ವ ನೋಡಿ ನಸುನಗೆ ಬೀರಿದ ವಿಜಯ. ಬಾಯಿಗೆ ತೋರಿದಂತೆ ಹೇಳುವನೇ ಹೊರತು ಆ ಮಾತುಗಳ ಅರ್ಥ, ಭಾವ, ಪವಿತ್ರತೆ ಅಣ್ಣಯ್ಯನಿಗೆ ತಿಳಿಯದು.

ಅಣ್ಣಯ್ಯನನ್ನು ವಿಜಯ ಹಿಂಬಾಲಿಸಿದ. ಅವರು ನೆಟ್ಟಗೆ ಅಡವಿಯನ್ನು ದಾಟಿ ನರ್ಮದಾ ನದಿಯ ತೀರಕ್ಕೆ ಬಂದರು.

ಅಲ್ಲಿ ಹಡಗಿನವರ ಕೋಲಾಹಲ ವಿಪರೀತ ವಾಗಿತ್ತು. " ರಾತ್ರಿ ಯಾರೋ ನನ್ನ ಹಡ ಗನ್ನು ದಾಟಿಸಿಬಿಟ್ಟಿದ್ದಾರೆ. ಅದು ಪತ್ತೆಯಿಲ್ಲ ದಾಗಿದೆ. ಎಷ್ಟು ಧೈರ್ಯ! ಎಂಥ ಸಾಹಸ! ಕಳ್ಳ ಸಿಕ್ಕಿದರೆ ಬಲಿ ಹಾಕುತ್ತೇನೆ " ಎಂದ ಒಬ್ಬ ಆಸಾಮಿ.

ಆತನ ಸುತ್ತು ನೆರೆದಿದ್ದವರೆಲ್ಲಾ ಇದೇ ಘೋರಣೆಗೆ ಹೊಂದಿದ್ದರು. ತಮ್ಮ ಗುರ್ತು




ಎಲ್ಲಿ ಕಂಡು ಹಿಡಿದು ಬಿಡುವರೋ ಎಂದು ವಿಜಯನು ಹೆದರಿದ.

" ಜೈ ಸೀತಾ ರಾಂ " ಎಂದು ಅಣ್ಣಯ್ಯ ಅವರನ್ನು ಸಮೀಪಿಸಿದ. "ಮಕ್ಕಳೇ, ಏನಿದು ಗಲಭೆ?" ಎಂದು ಗಂಭೀರವಾಗಿ ಅಧಿಕಾರ ವಾಣಿಯಿಂದ ಕೇಳಿದ.

ಅಲ್ಲಿದ್ದ ಅಂಬಿಗರೆಲ್ಲಾ ಇವರ ಸುತ್ತೂ ನೆರೆ ದರು. ಮೊದಲೇ ಹೆದರಿದ್ದ ವಿಜಯವರ್ಮ ಎಲ್ಲಿ ಅಣ್ಣಯ್ಯ ತಮ್ಮ ರಹಸ್ಯವನ್ನು ಬಯಲು ಮಾಡಿ ಬಿಡುತ್ತಾನೆಯೋ ಎಂದು ಮತ್ತಷ್ಟು ಹೆದರಿದ.

ಪರಿಸ್ಥಿತಿ ಇಷ್ಟು ದೂರ ಬಂದ ಮೇಲೆ ಏನು ತಾನೇ ಮಾಡುವನು? ಅದ:ದರಿಂದ ಆಗ ಸುಮ್ಮನಿದ್ದ.




"ರಾತ್ರಿ ಗಾಳಿ ಮಳೆಯಲ್ಲಿ ನಮ್ಮ ಹಡಗುಗಳನ್ನು ಯಾರೋ ಕದ್ದುಬಿಟ್ಟಿದ್ದಾರೆ. ಅವರೀಗ ಎಲ್ಲಿರುವರೋ, ಅಂಜನ ಹಾಕಿ ತಿಳಿಸಿ ಮಹಾ ಸ್ವಾಮಿ" ಎಂದರು ಹಡಗಿನವರು.

"ಮಕ್ಕಳೇ, ಇದೆಕ್ಕೆಲ್ಲಾ ಅಂಜನವೇಕೆ?" ಎಂದ ಅಣ್ಣಯ್ಯ. ತರುವಾಯ ನರ್ಮದೆಯ ಆಚೆ ದಡದಲ್ಲಿದ್ದ ದೇವಪುರದಕಡೆ ತೋರಿಸಿ, "ನಿಮ್ಮ ಹಡಗುಗಳೆಲ್ಲಾ ನರ್ಮದಾ ನದಿಯ ದಡದಲ್ಲಿರಬಹುದು. ಅವುಗಳನ್ನು ಅಪಹಸಿದ ಧೂರ್ತರು ಅದೋ ಅಲ್ಲಿ ಕಾಣಿಸುವ ಭವನದಲ್ಲಿದ್ದಾರೆ" ಎಂದ.

ಆ ಮಾತುಗಳನ್ನು ಕೇಳಿ ಅಂಬಿಗರಿಗೆ ತುಂಬಾ ರೋಷವುಂಟಾಯಿತು. ಆವೇಶದಿಂದ "ನಡೆಯಿರಿ, ನಡೆಯಿರಿ, ಆ ಕಳ್ಳರನ್ನು ಕೊಲ್ಲಬೇಕು. ನಮಗೆ ಅಪಕಾರ ಮಾಡಿದ ದುರುಳರವರು. ಅವರನ್ನು ಉಳಿಸಬಾರದು ಸದೆ ಬಡೆದು ಹಾಕೋಣ" ಎಂದು ತಮ್ಮ ಕೈಗೆ ಸಿಕ್ಕಿದ ಆಯುಧಗಳನ್ನು ತೆಗೆದುಕೊಂಡರು.

ಇದೆಲ್ಲವನ್ನೂ ಕೌತುಕದಿಂದ ನೋಡುತ್ತಿದ್ದ ವಿಜಯವರ್ಮ. ಅಂಬಿಗ ಅಣ್ಣಯ್ಯನ ಯುಕ್ತಿಗೆ, ಸಂದರ್ಭೋಚಿತವಾದ ಮಾತಿಗೆ ಮೆಚ್ಚಿಕೊಂಡ. ಆಕಸ್ಮಾತ್ ಎಲ್ಲಿ ತಮ್ಮ ಗುಟ್ಟು ಬಯಲಾಗುವುದೋ ಎಂದು ಮನಸ್ಸಿನಲ್ಲಿ ಹೆದರಿಕೆ ಇದ್ದೇ ಇತ್ತು.

"ಮಕ್ಕಳೇ, ಅವಸರದ ಕೆಲಸ ಕೂಡದು" ಎಂದು ಎಚ್ಚರಕೊಟ್ಟ ಅಣ್ಣಯ್ಯ. "ನಮ್ಮಿಬ್ಬರನ್ನೂ ಆಚೆ ದಡ ಸೇರಿಸಿ. ಆ ಭವನದಲ್ಲಿರುವವರ ವಿಷಯ ತಿಳಿದುಕೊಂಡು ಬರುತ್ತೇವೆ. ತರುವಾಯ ನಿಮ್ಮ ಇಷ್ಟಪ್ರಕಾರ ಸೇಡು ತೀರಿಸಿಕೊಳ್ಳಲು ಸುಲಭವಾಗಬಹುದು"

"ಹಾಗಾದರೆ ನೀವು ಯಾವಾಗ ಹಿಂತಿರುಗುವಿರಿ ಸ್ವಾಮಿ?" ಎಂದು ಆತುರದಿಂದ ಕೇಳಿದರು ಅವರು.

"ತಕ್ಷಣ ಬಂದು ಬಿಡುವೆವು. ಅನ್ಯಾಯಕ್ಕೆ ಗುರಿ ಮಾಡಿದ ತಮ್ಮಂತಹ ಅಮಾಯಕರಿಗೆ ನ್ಯಾಯ ದೊರಕಿಸುವುದೇ ನಮ್ಮ ಗುರಿ. ನಮ್ಮ ಕರ್ತವ್ಯ! ಮೊದಲು ನಮ್ಮನ್ನು ನದಿ ದಾಟಿಸಿರಿ. ಮತ್ತೊಂದು ಮಾತು—ಆ ಭವನದಿಂದ ನದಿ ದಾಟಿ ಬರುವ ಭಟರನ್ನು ನಾವು ಬರುವವರೆವಿಗೂ ಬಂಧಿಸಿಡಿ" ಎಂದು ಆಜ್ಞೆ ಮಾಡಿದ ಅಣ್ಣಯ್ಯ.

ಈ ಮಾತುಗಳನ್ನು ಕೇಳಿ ಅಂಬಿಗರು ಆನಂದಪಟ್ಟರು. 'ನಮ್ಮ ಪಾಲಿನ ದೇವರ ಹಾಗೆ ಬಂದರು ಈ ಯತೀಶ್ವರರು' ಎಂದು ಕೊಂಡು ಕೂಡಲೇ ಒಂದು ಹಡಗಿನಲ್ಲಿ ಅವರ ನ್ನೇರಿಸಿಕೊಂಡು ನದಿ ದಾಟಿಸಿದರು.

ಭೀಮವರ್ಮನ ಭವನಕ್ಕೆ ಸ್ವಲ್ಪ ದೂರ ದಲ್ಲಿ ಒಂದುಕಡೆ ಹಡಗನ್ನು ನಿಲ್ಲಿಸಿದರು. ಯೋಗೀಶ್ವರರಿಬ್ಬರೂ ಹಡಗಿನಿಂದ ಇಳಿದು ನೆಟ್ಟಗೆ ಭವನವನ್ನು ಪ್ರವೇಶಿಸಿದರು. ಮಂಗಳ ವಾದ್ಯಗಳು ಮೊಳಗುತ್ತಿವೆ.

"ಮದುವೆಯ ಏರ್ಪಾಟು ತುಂಬಾ ಜೋರಾಗಿರುವಂತಿದೆ. ಕರುಣಳನ್ನು ಈ ಮದುವೆಗೆ ಬಹಳ ಬಲವಂತಪಡಿಸಿರಬೇಕು" ಎಂದ ವಿಜಯ.

ಅಣ್ಣಯ್ಯ ಆತನ ಮಾತುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. "ಜೈ ಸೀತಾ ರಾಂ" ಎಂದು ಜಯಕಾರಮಾಡಿ, ಗುಂಪಿನಲ್ಲಿ ಸೇರಿ, ಭವನದಲ್ಲೆಲ್ಲಾ ಸುತ್ತಾಡಲು ಪ್ರಾರಂಭಿಸಿದ. ವಿಜಯನೂ ಸಹ ಆತನನ್ನು ಹಿಂಬಾಲಿಸಿದ. ವಿಜಯವರ್ಮನ ಅನುಮಾನ ದೃಢವಾಯಿತು. ಅಲ್ಲಿ ಓಡಾಡುತ್ತಿದ್ದ ದಾಸದಾಸಿಯರ ಮತ್ತು ಜನರ ಮಾತುಗಳಿಂದ ಕರುಣಳಿಗೆ ಬಲವಂತ ಮಾಡಿ ಮದುವೆ ಮಾಡುತ್ತಿರುವ ರೆಂದು ತಿಳಿಯಿತು. ವರನು ಯಾರೋ ಆತನಿಗೆ ತಿಳಿಯಲಿಲ್ಲ. ಸಮಯವು ಬಹಳ ಇಕ್ಕಟ್ಟಿನ ದಾಗಿತ್ತು. ಅವನ ಹೃದಯವು ತುಂಬಾ ಕಸವಿಸಿಗೊಳ್ಳುತ್ತಿತ್ತು. ಆ ಸಮಯದಲ್ಲಿ ಒಳ್ಳೆಯ ಭರ್ಜರಿ ಪೋಷಾಕುಗಳನ್ನೂ ಬೆಲೆ





ಬಾಳುವ ಆಭರಣಗಳನ್ನೂ ಧರಿಸಿಕೊಂಡಿದ್ದ ಮೂವರು ಬಂದು ಮೂಲೆಯಲ್ಲಿ ಹರಟೆ ಕೊಚ್ಚುತ್ತಿದ್ದರು. "ಜೈ ಸೀತಾ ರಾಂ" ಎಂದು ಅವರ ಹತ್ತಿರಕ್ಕೆ ಹೋದ ಅಣ್ಣಯ್ಯ.

"ಓ, ಯಾರೋ ಸಾಧುಗಳು ಬಂದಿದ್ದಾರೆ. ನಮ್ಮ ಪ್ರಶ್ನೆಗಳಿಗೆ ಉತ್ತರಹೇಳಬಹುದು" ಎಂದ ಅವರಲ್ಲೊಬ್ಬ.

ಅಣ್ಣಯ್ಯ ಕಮಂಡಲುವನ್ನು ಮೇಲೆತ್ತಿ "ಮಕ್ಕಳೇ, ಏನು ನಿಮ್ಮ ಸಂದೇಹ?" ಎಂದ. ವಿಜಯ ಆತನ ಪಕ್ಕದಲ್ಲಿ ನಿಂತಿದ್ದ.

"ಕಬಂಧ ವರ್ಮನೊಂದಿಗೆ ಕರುಣಳ ವಿವಾಹ ಸುಸೂತ್ರವಾಗಿ ಜರುಗುವುದೇ?"

"ಆ ಸಂಶಯ ಬರಲು ಕಾರಣವೇನು?" ಎಂದ ಅಣ್ಣಯ್ಯ ಕಣ್ಣರಳಿಸುತ್ತಾ.

"ತ್ರಿಕಾಲಜ್ಞರಾದ ನಿಮಗೆ ಅದರ ಕಾರಣ ತಿಳಿದಿರ ಬೇಕು. ಸರಿ, ನೀವು ಚಂಡಿದಾಸನ ಗುಂಪಿನವರಲ್ಲವಷ್ಟೆ?" ಎಂದೊಬ್ಬ ಸಂಶಯ ಸೂಚಿಸಿದ.

ಈ ಮಾತುಗಳನ್ನು ಕೇಳಿ ವಿಜಯ ತುಸ ಬೆಚ್ಚಿಬಿದ್ದ. ಆದರೆ ಅಣ್ಣಯ್ಯ ಗಂಭೀರ ವಾಣಿಯಿಂದ,

"ಮಕ್ಕಳೇ, ನೀವು ಹೇಳಿದ್ದು ಸರಿ. ತ್ರಿಕಾಲಜ್ಞರಾದ ನಮಗೆ ಸಮಸ್ತವಿಷಯಗಳೂ ತಿಳಿದಿರುತ್ತವೆ. ದ್ರೋಹಿಯೂ, ದರೋಡೆಕಾರನೂ ಆದ ಚಂಡೀದಾಸನೊಂದಿಗೆ ನಮ್ಮನ್ನು ಸೇರಿಸುವುದು ಮಹಾಪರಾಧ. ನಿಜವಾಗಿ ನೋಡಿದರೆ ನಿಮಗೆ ನಾವು ಶಾಪ ಕೊಡಬೇಕು. ಆದರೆ ಈ ಸಾರಿ ನಿಮ್ಮನ್ನು ಕ್ಷಮಿಸಿರುವೆವು" ಎಂದು ಕಣ್ಣು ಕೆಂಡದಂತೆ ಕೆಂಪಗೆ ಮಾಡಿದ.

ಅಣ್ಣಯ್ಯನ ಗಂಭೀರವಾಣಿ ಕೇಳಿ ಅವರು ಗಡಗಡ ನಡುಗಿದರು.

"ಕ್ಷಮಿಸಿ, ಮಹಾತ್ಮರೇ ಕ್ಷಮಿಸಿ" ಎಂದು ಅವರು ಅಣ್ಣಯ್ಯ ಮತ್ತು ವಿಜಯವರ್ಮನ ಪಾದಗಳ ಮೇಲೆ ಬಿದ್ದು ಕ್ಷಮೆ ಯಾಚಿಸಿದರು.

"ಏಳಿ, ಏದ್ದೇಳಿ. ಈಸಾರಿ ಕ್ಷಮಿಸಿದ್ದೇವೆ" ಎಂದ ಅಣ್ಣಯ್ಯ. "ಹಿಮಾಲಯದಲ್ಲಿ ಅರುವತ್ತು ವರ್ಷ ತಪಸ್ಸು ಮಾಡಿದ್ದು ನಿಮ್ಮಂತಹ ಮೂರ್ಖರ ನಿಂದೆಗಳನ್ನು ಹೊರುವುದಕ್ಕಲ್ಲ. ಹೂಂ, ಹೋಗಿ ಇಲ್ಲಿಂದ ತೊಲಗಿ. ಕರುಣಳೊಂದಿಗೆ ಕಬಂಧವರ್ಮನ ವಿವಾಹ ನಿರಾ

ಟಂಕವಾಗಿ ನಡೆಯುವುದು" ಎಂದು ಹೇಳಿ ಅಲ್ಲಿಂದ ಹೊರಟುಬಿಟ್ಟ. ವಿಜಯನೂ ಅವನ ಹಿಂದೆಯೆ ನಡೆದ.

ವಿಜಯನಿಗೆ ವಿಪರೀತ ಕೋಪ ಬಂತು. ಕಬಂಧವರ್ಮನ ವಿಷಯ ಆತನಿಗೆ ತಿಳಿದಿದೆ. ಐವತ್ತು ವರ್ಷದ ಮುದುಕ ಕಬಂಧವರ್ಮನಿಗೂ, ಸುಕೋಮಲೆ ಕರುಣಳಿಗೂ ಮದುವೆಯೇ? ಭೀಮವರ್ಮನ ಬಲೆಯಿಂದ ಕರುಣಳನ್ನು ಹೇಗಾದರೂ ಕಾಪಾಡಬೇಕು ಎಂದು ನಿರ್ಧರಿಸಿದ ವಿಜಯ.

ಅಣ್ಣಾಯ್ಯ ಅಡಿಗಡಿಗೆ 'ಜೈ ಸೀತಾರಾಂ' ಎಂದೆನ್ನುತ್ತಾ ಭವನದಲ್ಲೆಲ್ಲಾ ಸುತ್ತಾಡುತ್ತಿದ್ದ. ಸನ್ಯಾಸಿಯ ವೇಷದಲ್ಲಿದ್ದ ಅವರನ್ನು ಯಾರೂ ನಿರ್ಬಂಧಿಸುತ್ತಿರಲಿಲ್ಲ. ವೇಷವೂ ವೇಷಕ್ಕೆ ತಕ್ಕ ನಟನೆಯೂ ಅವರಿಗೆ ಚೆನ್ನಾಗಿ ಒಪ್ಪಿತ್ತು. ಐಹಿಕ ಸುಖಗಳನ್ನು ತೊರೆದವರನ್ನು ಕಂಡರೆ ಯಾರಿಗೂ ಅನುಮಾನವುಂಟಾಗುವುದಿಲ್ಲವಷ್ಟೆ!

ಸ್ವಲ್ಪ ಹೊತ್ತು ಅತ್ತಿತ್ತ ಓಡಾಡಿದ ನಂತರ ವಿಜಯವರ್ಮನು ಅಣ್ಣಯ್ಯನನ್ನು ಒಂದು ಪಕ್ಕಕ್ಕೆ ಕರೆದ. ಜನ ಸಮೂಹವಿಲ್ಲದೆಡೆಯಲ್ಲಿ ಅವರಿಬ್ಬರೂ ಕುಳಿತುಕೊಂಡು ಮುಂದಿನ ಕರ್ತವ್ಯವನ್ನು ಸಾವಕಾಶವಾಗಿ ಯೋಚಿಸಿಕೊಂಡರು.

"ಈ ವಿವಾಹವನ್ನು ಹೇಗಾದರೂ ಮಾಡಿ ನಿಲ್ಲಿಸಲೇ ಬೇಕು. ಕೂಡಲೇ ನಾವು ಸತ್ರಕ್ಕೆ ಹಿಂತಿರುಗಿ ಕೆಲವರನ್ನು ಜೊತೆ ಮಾಡಿಕೊಂಡು



ಬರಬೇಕು. ಏನುಹೇಳುವಿ ಅಣ್ಣಾಯ್ಯ?"ಎಂದ ವಿಜಯ."ಅದಾಗದು,ಇನ್ನೊಂದುಅರ್ಧಗಂಟೆಯಲ್ಲಿ ಮದುವೆಯ ಗುಂಪಿನವರೆಲ್ಲಾ ಅಡವಿಯಲ್ಲಿರುವ ದೇವಸ್ಥಾನಕ್ಕೆ ಹೊರಡುವರು. ದೇವಸ್ಥಾನದಲ್ಲಿ ಮದುವೆ. ಅಷ್ಟರೊಳಗೆ ನಾವು ಜನರನ್ನು ಸೇರಿಸಿಕೊಂಡು ಬರಲು ಸಮಯವಿಲ್ಲ" ಎಂದ ಅಣ್ಣಾಯ್ಯ.

"ಹಾಗಾದರೆ ಇಂದೋ ನಾಳೆಯೋ ಸಾಯುವ ಆ ಮುದುಕನೊಂದಿಗೆ ಕರುಣಳ ವಿವಾಹವು ನಡೆಯಲೇ ಬೇಕೇ?" ವಿಜಯನ ಮಾತಿನಲ್ಲಿ ದುಃಖವೂ ಉಕ್ರೋಷವೂ ಆತುರವೂ ಅಡಗಿತ್ತು.

ಅಣ್ಣಾಯ್ಯ ಪಕಪಕನೆ ನಕ್ಕು, ವಿಜಯನಿಗೆ ಏನೋ ಸಂಜ್ಞೆಮಾಡಿ ದೂರದಲ್ಲಿ ಗೋಡೆಗೆ

ಆತು ನಿಂತಿದ್ದ ಒಬ್ಬಾತನನ್ನು ತೋರಿಸಿದ. ಅವನಾರು?

ವಿಜಯನ ಆಶ್ಚರ್ಯಕ್ಕೆ ಪಾರವೇ ಇಲ್ಲ. ಗೋಡೆಯ ಪಕ್ಕದಲ್ಲಿ ನಿಂತು ಮದುವೆಯ ಏರ್ಪಾಟುಗಳನ್ನೆಲ್ಲಾ ನಿರೀಕ್ಷಿಸುತ್ತಿದ್ದ ವ್ಯಕ್ತಿ ಚಂಡಿದಾಸನ ಗುಂಪಿಗೆ ಸೇರಿದವನು.

ವಿಜಯವರ್ಮನು ಸುತ್ತಲೂ ಒಂದು ಸಾರಿ ದೃಷ್ಟಿ ಬೀರಿ 'ಜೈ ಸೀತಾ ರಾಂ' ಎಂದೆನ್ನುತ್ತಾ ಆತನ ಬಳಿಗೆ ಹೋದ. ಆತನ ಹಸ್ತ ರೇಖೆಗಳನ್ನು ಪರೀಕ್ಷಿಸುವವನಹಾಗೆ ನಟಿಸುತ್ತಾ—

"ಅರ್ಧ ಗಂಟೆಯಲ್ಲಿ ಮದುವೆಯವರ ಗುಂಪೆಲ್ಲಾ ಅಡವಿಯಲ್ಲಿರುವ ದೇವಸ್ಥಾನಕ್ಕೆ ಬರುತ್ತದೆ. ವ್ಯವಧಿಯಿಲ್ಲ. ನಿಧಾನಿಸಬಾರದು. ಕಾರ್ಯ ಮಿಂಚಿ ಹೋದೀತು. ಈ ವಿಷಯ ಚಂಡಿದಾಸನಿಗೆ ಹೇಳು" ಎಂದ.

ಆ ವ್ಯಕ್ತಿ ಬೆರಗಾಗಿ "ನೀವು ಯಾರು?" ಎಂದು ಕೇಳಿದ.

"ಓ, ನಾನು ಯಾರೆಂಬುದು ನಿನಗೆ ತಿಳಿಯಲಿಲ್ಲವೇ? ಹೋಗಲಿ ಬಿಡು. ಅದೂ ಒಂದು ರೀತಿ ಉತ್ತಮವೇ ಆಯಿತು. ತತ್‌ಕ್ಷಣ ಚಂಡಿದಾಸನ ಹತ್ತಿರಹೋಗಿ ಈ ವಿಷಯ ಹೇಳು" ಎಂದು ವಿಜಯ ತ್ವರೆಪಡಿಸಿದ. ಮತ್ತೆ ಅವನೇನೂ ತಡೆ ಹೇಳಲಿಲ್ಲ. 'ಒಳ್ಳೆಯದು' ಎಂದು ಆತನು ತಲೆಯಾಡಿಸಿ, ಅಲ್ಲಿಂದ ಸರಸರನೆ ಹೊರಟುಹೋದ.

ಸ್ವಲ್ಪ ಸಮಯವಾದನಂತರ ಮದುವೆಯ ಪರಿವಾರವೆಲ್ಲಾ ದೇವಸ್ಥಾನಕ್ಕೆ ಹೊರಟಿತು. ಜನಜಂಗುಳಿಯ ಗುಂಪು, ಮಂಗಳವಾದ್ಯಗಳ ಮೊಳಗಾಟಗಳಿಂದ ವಾತಾವರಣ ಕೋಲಾಹಲಕರವಾಗಿತ್ತು.

ಸನ್ಯಾಸಿವೇಷ ತಾಳಿದ್ದ ಅಣ್ಣಯ್ಯ ಮತ್ತು ವಿಜಯವರ್ಮರೂ ಅವರೊಂದಿಗೆ ಕಲೆತುಕೊಂಡು ದೇವಸ್ಥಾನಕ್ಕೆ ಹೊರಟರು.

ವಾದ್ಯಗಳ ಕೋಲಾಹಲವು ವಿಜಯವರ್ಮನ ಹೃದಯಕ್ಕೆ ತಿವಿಯುವಂತೆ ಕರ್ಕಶವಾಗಿ ಕೇಳುತ್ತಿತ್ತು. ಕರುಣಳನ್ನು ಉಳಿಸೆಂದು ದೇವರನ್ನು ಪ್ರಾರ್ಥಿಸಿಕೊಳ್ಳುತ್ತಾ ಇದ್ದನು ವಿಜಯವರ್ಮ.

[ಇನ್ನೂ ಇದೆ]






[ಕರುಣಳನ್ನು ಬಲವಂತವಾಗಿ ಮದುವೆಯಾಗಬೇಕೆಂದಿದ್ದ ಕಬಂಧವರ್ಮನು, ಚಂಡಿದಾಸನ ಪರಿವಾರದವರ ಬಾಣಕ್ಕೆ ಬಲಿಯಾಗುವನು. ಸೋಮಶರ್ಮ ಗಾಯಗೊಳ್ಳುವನು. ಸನ್ಯಾಸಿಯ ವೇಷದಲ್ಲಿದ್ದ ವಿಜಯವರ್ಮ ಅಣ್ಣಯ್ಯರನ್ನು ಭೀಮವರ್ಮನು ಗುರುತಿಸಿ ಅವರಿಗೆ ನೇಣುಶಿಕ್ಷೆ ವಿಧಿಸುವನು. ಆದರೆ ಆ ಶಿಕ್ಷೆಯನ್ನು ಜಾರಿಗೆ ತರುವ ಸಮಯಕ್ಕೆ ದೇವಪುರದ ಜಮೀನುದಾರನು ಅಲ್ಲಿಗೆ ಬಂದು ಹಂತಕರನ್ನು ವಿಚಾರಿಸುವ ಹಕ್ಕು ತನಗೆಮಾತ್ರವಿದೆಯೆಂದು ಭೀಮವರ್ಮನೊಂದಿಗೆ ವಾದಿಸಿ, ಅವರಿಬ್ಬರನ್ನೂ ತನ್ನ ಭವನಕ್ಕೆ ಕರೆದೊಯ್ಯುವನು.]

**ಮೊ**ದಲಿನಿಂದಲೂ ದೇವಪುರದ ಜಮೀನುದಾರನು ಕೊಸಲ್ಪೂರು ಪಕ್ಷಕ್ಕೇ ಸೇರಿದಾತ. ಅನುಕೂಲವಾಗಿರುವ ಪಕ್ಷದೊಂದಿಗೆ ಭುಜಕೊಡಿಸುವ ಭೀಮವರ್ಮನೆಂದರೆ ಆತನಿಗೆ ಕಡುಕೋಪ.

ಬಿಸಲ್ಪೂರು ರಾಜನ ಪಕ್ಷದವರು ಬಲಶಾಲಿಗಳು. ಅವರನ್ನು ಸೋಲಿಸಲು ಯಾರು ಎಷ್ಟೇ ಸಹಾಯಮಾಡಿದರೂ ತಮಗೇ ಉಪಕಾರವಾಗುವುದೆಂದು ಕೊಸಲ್ಪೂರಿನವರು ಭೀಮವರ್ಮನನ್ನು ತಮ್ಮ ಕಾರ್ಯಕ್ಕೆ ಉಪಯೋಗಿಸಿಕೊಳ್ಳುತ್ತಿರುವರು. ದೇವಪುರದ ಜಮೀನುದಾರರಿಗೆ ಭೀಮವರ್ಮನು ಮಹಾ ದಗಾಕೋರನೆಂಬ ವಿಷಯ ತಿಳಿದಿತ್ತು. ಸಮಯ ಸಿಕ್ಕಿತಾದುದರಿಂದ ಅವನ ಕಡುವಿರೋಧಿಯಾದ ವಿಜಯವರ್ಮನ ಗುಂಪಿನ ಮುಖಾಂತರ ಅವನ ರಹಸ್ಯಗಳನ್ನೆಲ್ಲಾ ತಿಳಿಯಲು ಕುತೂಹಲಗೊಂಡಿದ್ದ.

ಆ ಅವಕಾಶ ಈಗ ಲಭ್ಯವಾಯಿತು. ಬಹಳ ಉತ್ಸಾಹವಾಯಿತು ಜಮೀನುದಾರನಿಗೆ. ನ್ಯಾಯಸ್ಥಾನವಾಗಿ ಏರ್ಪಡಿಸಿದ್ದ ಮಂದಿರ




ದಲ್ಲಿ ದೇವಪುರದ ಜಮೀನುದಾರನು ಆಸನಾರೂಢನಾಗಿದ್ದ.

ವಿಜಯವರ್ಮ ಮತ್ತು ಅಣ್ಣಯ್ಯರನ್ನು ಸೈನಿಕರು ಆತನ ಮುಂದೆ ತಂದು ನಿಲ್ಲಿಸಿದರು. 'ಇವರ ಕೈಯಲ್ಲಿ ಸಿಲುಕಿಕೊಂಡಿದ್ದೇವೆ. ದೇವರ ಹೊರತು ನಮ್ಮನ್ನು ಮತ್ಯಾರೂ ಇನ್ನು ಕಾಪಾಡಲಾರರು' ಎಂದು ಅವರಿಬ್ಬರೂ ನೆನೆಸಿದ್ದರು. ರಣರಂಗದಲ್ಲಿ ವೀರ ಮರಣ ಹೊಂದಬೇಕಾದ ತನಗೆ ಊರು ಕೇರಿಯಿಲ್ಲದೆಡೆ ಸಾವು ಪ್ರಾಪ್ತಿಸುತ್ತಿರುವುದಕ್ಕಾಗಿ ವಿಜಯವರ್ಮ ಸಂತಾಪಗೊಂಡ.

ದೇವಪುರದ ಜಮೀನುದಾರನು ಅಣ್ಣಯ್ಯ ಮತ್ತು ವಿಜಯವರ್ಮರನ್ನು ದಿಟ್ಟಿಸಿ ನೋಡಿ ಹೀಗೆಂದು ಪ್ರಶ್ನೆಮಾಡಿದ:

"ನಿಜ ನುಡಿಯಿರಿ. ನೀವು ಯಾವ ಪಕ್ಷದವರು?—ಮರೆಮಾಜಬೇಡಿ"

ಇಂತಹ ಸುಲಭವಾದ ಪ್ರಶ್ನೆ ಬರುವುದೆಂದು ಅಣ್ಣಯ್ಯನಾಗಲೀ ವಿಜಯವರ್ಮನಾಗಲಿ ಭಾವಿಸಿರಲಿಲ್ಲ. ತಮ್ಮನ್ನು ಬಿಸಲ್ಪೂರಿನವರೆಂದು ಭೀಮವರ್ಮ ಪರಿಚಯಮಾಡಿಕೊಟ್ಟ ವಿಷಯ ದೇವಪುರದ ಜಮೀನುದಾರನು ನಂಬಿರುವನೆಂದುಕೊಂಡಿದ್ದ ಅವರಿಗೆ ಈ ಪ್ರಶ್ನೆ ಆಶ್ಚರ್ಯವನ್ನುಂಟುಮಾಡಿತು. ಆದರೂ ವಿಜಯ ಹೇಳಲೇಬೇಕು. ಸುಳ್ಳಾಡಿ ತಪ್ಪಿಸಿಕೊಳ್ಳುವಂತಿಲ್ಲ. ತಮ್ಮನ್ನು ಕೊಸಲ್ಪೂರು ಪಕ್ಷದವರು ಹಿಡಿದು ಬಂಧಿಸಿರುವುದರಿಂದ ತಾವು ಬಿಸಲ್ಪೂರಿನವರೆಂದು ಸ್ಪಷ್ಟವಾದಂತೆ ತಾನೇ?

"ನಾನು ಬಿಸಲ್ಪೂರಿನವನು. ಈತ ಯಾವ ಗುಂಪಿಗೂ ಸೇರಿದವನಲ್ಲ. ಒಂದಾನೊಂದು ಸಂದರ್ಭದಲ್ಲಿ ನನ್ನ ಸ್ನೇಹಿತನಾದ. ಆಗಿನಿಂದ ನನಗೆ ಸಹಾಯಕನಾಗಿದ್ದಾನೆ. ಈತನ ಹೆಸರು ಅಣ್ಣಯ್ಯ, ಕಸಬಿನಲ್ಲಿ ಅಂಬಿಗ. ಬಹಳ ಒಳ್ಳೆಯವ.

ಮುಚ್ಚುಮರೆಯಿಲ್ಲದೆ ವಿಜಯವರ್ಮನಿತ್ತ ಜವಾಬಿನಿಂದ ದೇವಪುರದ ಜಮೀನುದಾರನು ತೃಪ್ತಿಗೊಂಡಂತೆ ಕಾಣಿಸಿತು. ಆತನ ಮುಖದಲ್ಲಿ ಕಿರುನಗೆ ಮೂಡಿತು.

"ನೀನು ಅಭಯವರ್ಮನಿಗೆ ತಕ್ಕ ಮಗನೆನ್ನಿಸಿಕೊಂಡೆ ಕಣಯ್ಯಾ!" ಎಂದು, ಹೀಗೆ ಮುಂದು ವರೆಸಿದ.

"ನಿನ್ನ ತಂದೆಯನ್ನು ನಾನು ಬಲ್ಲೆ. ಕಾಲಪರಿಸ್ಥಿತಿಗೆ ಹೊಂದಿಕೊಂಡು ವರ್ತಿಸದಿದ್ದರೆ ಎಷ್ಟು ಕಷ್ಟವೆಂಬುದಕ್ಕೆ ನಿನ್ನ ತಂದೆಯೇ ಒಂದು ಉದಾಹರಣೆ. ಚಿತ್ರಹಿಂಸೆಗೆ ಸಿಲುಕಿ ಆತನು ಮರಣ ಹೊಂದಿದ ಸಂಗತಿ ಎಲ್ಲರೂ ಅರಿತಿರುವ ವಿಷಯವೇ! ನಾನು ಕೊಸಲ್ಪೂರಿನವನು. ಆದರೂ ನಿನ್ನನ್ನು ಕ್ಷಮಿಸಿಬಿಟ್ಟು ಬಿಡುತ್ತೇನೆ"

"ಹಾಗಾದರೆ ಅಣ್ಣಯ್ಯನ ವಿಷಯವೇನು?" ಎಂದ ವಿಜಯವರ್ಮ, ಜಮೀನುದಾರನ ಮಾತಿನ ಅರ್ಥವನ್ನು ಗ್ರಹಿಸಿ.

"ಬಿಡಬೇಕಾಗಿಲ್ಲ. ಅವನ ವಿಚಾರ ನಾನು ತುಂಬಾ ದಿನಗಳಿಂದ ಕೇಳುತ್ತಿರುವೆನು. ಈ ಪ್ರಾಂತ್ಯದಲ್ಲಿ ಅಂತಹ ದಗಾಕೋರ ಬೇರೊಬ್ಬನಿಲ್ಲ. ನೇಣು ಹಾಕಿದರೆ ಮೊದಲು ತುಸತೊಂದರೆಯಾದರೂ ಅವನಿಗೂ ಇತರರಿಗೂ ತರುವಾಯ ಎಷ್ಟೋ ಹಾಯಾಗಿರುತ್ತದೆ."

ಜಮೀನುದಾರನ ಮಾತು ಕೇಳುತ್ತಿದ್ದರೆ ಅಣ್ಣಯ್ಯನಿಗೆ ನಿಜವಾಗಿ ನೇಣುಹಗ್ಗ ಕೊರಳಿಗೆ ಬಿಗಿದಂತಿತ್ತು. ದೈನ್ಯತೆಯಿಂದ ವಿಜಯನ ಕಡೆ ನೋಡಿದ.

ಆಗ ವಿಜಯವರ್ಮನು ಧೈರ್ಯದಿಂದ ಜಮೀನುದಾರನನ್ನು ಉದ್ದೇಶಿಸಿಗಂಭೀರವಾಣಿಯಿಂದ ಹೀಗೆಂದ:

"ನಿಮ್ಮ ದಯೆಗೆ ಪಾತ್ರವಾದುದಕ್ಕೆ ನನಗೆ ಹೆಮ್ಮೆಯಾಗಿದೆ. ಸತ್ಯವಾಗಿ ಹೇಳಬೇಕಾದರೆ




ನನಗೆ ಕೊಸಲ್ಪೂರು—ಬಿಸಲ್ಪೂರು ರಾಜವಂಶಗಳ ನಡುವಿನ ಹೊಡೆದಾಟದಲ್ಲಿ ಆಸಕ್ತಿಯಿಲ್ಲ. ಭೀಮವರ್ಮ ಸೋಮಶರ್ಮರು ನನ್ನ ತಂದೆಗೆ ಮತ್ತು ನನಗೆ ಮಾಡಿರುವ ಅನ್ಯಾಯಗಳಿಗಾಗಿ ಹಗೆ ತೀರಿಸಿಕೊಳ್ಳಬೇಕೆಂಬುದು ನನ್ನ ಉದ್ದೇಶ. ಅಷ್ಟೇ. ನನ್ನನ್ನು ಕ್ಷಮಿಸುವುದಾದರೆ ನನ್ನ ಮಿತ್ರನಾದ ಅಣ್ಣಯ್ಯನನ್ನೂ ಕ್ಷಮಿಸಬೇಕೆಂದು ನನ್ನ ಪ್ರಾರ್ಥನೆ."

ಗಂಭೀರ ವಾಣಿಯಿಂದ ವಿಜಯವರ್ಮ ಈ ರೀತಿ ನುಡಿದ ಮಾತುಗಳನ್ನು ಕೇಳಿ ಕ್ಷಣಕಾಲ ದೇವಪುರದ ಜಮೀನುದಾರನು ತಬ್ಬಿಬ್ಬಾದ. ಒಂದುಸಾರಿ ದೀರ್ಘವಾಗಿ ನಿಟ್ಟುಸಿರಿಟ್ಟು ಖಂಡಿತ ಸ್ವರದಿಂದ—




ಅವರಿಬ್ಬರೂ ಅಡ್ಡದಾರಿ ಹಿಡಿದು ಅಡವಿ ಸೇರುವ ಹೊತ್ತಿಗೆ ಸೂರ್ಯಾಸ್ತಮವಾಯಿತು. ವಿಜಯು ಮತ್ತು ಅಣ್ಣಾಯ್ಯ ಹಸಿವಿನಿಂದ ತಳಮಳಿಸುತ್ತಿರುವರು. ಮೊದಲು ಊಟ, ನಂತರ ವಿಶ್ರಾಂತಿ ಹೊರತು ಬೇರೆ ಯಾವ ಕೆಲಸ ಮಾಡಬೇಕೆಂದೂ ಅವರಿಗೆ ಹೊಳೆಯಲಿಲ್ಲ.

"ನಾನು ನನ್ನ ಗುಪ್ತಗೃಹಕ್ಕೆ ಹೋಗುತ್ತೇನೆ. ನೀನು ಛತ್ರ ಸೇರಿಕೊಳ್ಳುವೆಯಾ?" ಎಂದು ವಿಜಯವರ್ಮನನ್ನು ಕುರಿತು ಅಣ್ಣಾಯ್ಯ ಕೇಳಿದ.

"ಅದೇ ಅಲೋಚಿಸುತ್ತಿದ್ದೇನೆ. ನಾವು ಕೈಹಾಕಿದ ಕೆಲಸ ಪೂರ್ತಿಯಾಗಲಿಲ್ಲ. ಸ್ವಲ್ಪಮಾತ್ರ ಮುಗಿಯಿತು. ಕರುಣಳನ್ನು ಕಾಪಾಡಿ ಜೊತೆಯಲ್ಲಿ ಕರೆತರದೆ ಹೋದರೂ ಆ ಬಲತ್ಕಾರದ ಮದುವೆಯಿಂದ ಆಕೆಯನ್ನು ಪಾರು ಮಾಡಿದೆವು. ಮುಂದಿನ ಕರ್ತವ್ಯ ನಾಳೆ ಯೋಚಿಸೋಣ. ನಾನು ಛತ್ರಕ್ಕೆ ಹೋಗುತ್ತೇನೆ" ಎಂದ ವಿಜಯವರ್ಮ.

ಅಣ್ಣಾಯ್ಯ ಅಡವಿಯ ನಡುವಿನಲ್ಲಿದ್ದ ತನ್ನ ರಹಸ್ಯಗೃಹಕ್ಕೆ ಹೋದ. ವಿಜಯವರ್ಮ ಬೇಗಬೇಗನೆ ನಡೆಯುತ್ತಾ ಛತ್ರದ ಕಡೆಗೆ ಮುಖಮಾಡಿ ಹೊರಟ.

ಆಗ ಛತ್ರದಿಂದ ಆತನನ್ನು ಹುಡುಕಿಕೊಂಡು ಇಬ್ಬರು ಸೇವಕರು ಬರುತ್ತಿರುವುದನ್ನು ನೋಡಿದ.ಅವರ ನಡೆಗೆಯರೀತಿಯನ್ನು ಕಂಡು ಏನೋ ಪ್ರಮಾದ ನಡೆದಿರಬೇಕೆಂದು

"ಸರಿ, ಇಬ್ಬರನ್ನೂ ಮುಕ್ತರನ್ನಾಗಿ ಮಾಡುವೆವು. ನೀವು ಮಾತ್ರ ಇನ್ನುಮೇಲೆ ನಮ್ಮ ಕಣ್ಣಿಗಾಗಲೀ, ನಮ್ಮ ಸೈನಿಕರ ದೃಷ್ಟಿಗಾಗಲೀ ಈ ಸುತ್ತಮುತ್ತಲಿನ ಪ್ರದೇಶದಲ್ಲಿ ಗೋಚರಿಸ ಬಾರದು. ಜೋಕೆ. ಹೊರಡಿ" ಎಂದು ಆಜ್ಞಾಪಿಸಿದ.

ವಿಜಯವರ್ಮ, ಅಣ್ಣಾಯ್ಯ ಜಮೀನುದಾರನಿಗೆ ನಮಸ್ಕಾರಮಾಡಿ, ಹೊರಕ್ಕೆ ಬಂದರು. ಇನ್ನು ಆ ಪ್ರಾಂತ್ಯದಿಂದ ಆದಷ್ಟು ಬೇಗ ಹೊರಬಿದ್ದು ತಮ್ಮ ನಿವಾಸ ಸೇರಿಕೊಳ್ಳುವುದು ಸುರಕ್ಷಿತವೆಂದು ತೋರಿತು. ಆದರಲ್ಲೂ ಭೀಮವರ್ಮನ ಸೈನಿಕರ ಕೈಗೆ ಸಿಕ್ಕದೆ ತಪ್ಪಿಸಿಕೊಂಡು ಹೋಗುವುದು ಮುಖ್ಯವಾಗಿತ್ತೆಂದು ಚೆನ್ನಾಗಿ ಅರಿತಿದ್ದರು.

ಭಾವಿಸಿ ವಿಜಯವರ್ಮನು ಅವಸರವಸರವಾಗಿ ನಡೆದು ಅವರಿಗೆದುರಾದ.

ಅನುಚರರಿಬ್ಬರೂ ವಿಜಯವರ್ಮನನ್ನು ಸಮೀಪಿಸಿದರು. ಗೆಲುವಾಗಿದ್ದ ಅವರ ಮುಖ ಕಂಡು ಏನೋ ಶುಭಸಮಾಚಾರ ತಂದಿರುವರೆಂದು ವಿಜಯವರ್ಮನು ಅರಿತನು.

"ಏನು ಸಮಾಚಾರ?" ಎಂದ ವಿಜಯ ಆತುರದಿಂದ.

"ಬಹಳವಿದೆ. ಛತ್ರ ಸೇರಿದ ಕೂಡಲೇ ಅರಿಕೆ ಮಾಡುತ್ತೇವೆ. ಮೊದಲು ಈ ಕಾಗದವನ್ನು ನೋಡಿ" ಎಂದು ಅನುಚರರಲ್ಲಿ ಒಬ್ಬ ಒಂದು ಕಾಗದವನ್ನು ವಿಜಯನಿಗೆ ಕೊಟ್ಟನು.

ವಿಜಯವರ್ಮನು ಆ ಕಾಗದವನ್ನು ಎರಡು ಮೂರು ಬಾರಿ ಓದಿದ:

ಚಂದ್ರದುರ್ಗಾಧಿಪತಿ ಬೀಸಲ್ಪೂರು ರಾಜನಿಂದ ಕರೆ ಬಂದಕೂಡಲೇ ತನ್ನ ಅನುಚರರೊಂದಿಗೆ ಹೊರಟುಹೋದ. ಅಲ್ಲಿಗೆ ೨೦ ಮೈಲಿ ದೂರದಲ್ಲಿ ಬೀಸಲ್ಪೂರು—ಕೋಸಲ್ಪೂರುಗಳ ನಡವೆ ಭಾರಿ ಕಾಳಗವಾಗುವ ಸಂಭವವಿತ್ತಾದುದರಿಂದ ಆತನಿಗೆ ಆ ಕರೆ ಬಂದಿತ್ತು. ವಿಜಯವರ್ಮನು ಅದಷ್ಟು ಹುಷಾರಾಗಿ ನಡೆದುಕೊಳ್ಳಬೇಕೆಂದೂ, ಅನುಚರರೊಂದಿಗೆ ಯಾವ ನಿಮಿಷವಾದರೂ ಯುದ್ಧರಂಗಕ್ಕೆ ಬರಲು ಸಿದ್ಧವಾಗಿರಬೇಕೆಂದೂ ಅದರಲ್ಲಿ ಬರೆದಿತ್ತು.

ಈ ಕಾಗದದಿಂದ ವಿಜಯವರ್ಮನಿಗೆ ಅಪಾರ ಆನಂದವುಂಟಾಯಿತು. ಕ್ಷೀಪ್ರದಲ್ಲೇ




ಕೋಸಲ್ಪೂರು ರಾಜ್ಯವು ರಣರಂಗವಾಗುವುದೆಂದು ಆತನಿಗೆ ಸಂತೋಷವಾಯಿತು. ಈ ಏಟಿನಿಂದ ಭೀಮವರ್ಮನ ದೊಡ್ಡಸ್ತಿಕೆ ಎಲ್ಲಾ ಬಯಲಾಗುವುದೆಂದೂ, ಅಸಲು ಆತನು ಬಿಡಾರ ಮಾಡಿದ್ದ ನರ್ಮದಾನದಿಯ ತೀರದ ಭವನವೇ ಕದನ ಭೂಮಿಯಾಗುವುದೆಂದೂ, ವಿಜಯವರ್ಮ ಭಾವಿಸಿದ.

ಅನುಚರರೊಂದಿಗೆ ವಿಜಯವರ್ಮ ಛತ್ರವನ್ನು ಸೇರಿದ. ಅಲ್ಲಿ ಪರಿಸ್ಥಿತಿಯೆಲ್ಲಾ ಕೋಲಾಹಲಕರವಾಗಿತ್ತು. ಬೇಹುಗಾರರು ವಿವಿಧ ವಾರ್ತೆಗಳನ್ನು ತಂದರು. ಸಾವಿರಗಟ್ಟಲೆ ಸೈನ್ಯ ಅರಣ್ಯ ಮಾರ್ಗದಲ್ಲಿ ಬರುತ್ತಿರುವುದೆಂದು ಹೇಳಿದರು. ಎಲ್ಲರಿಗೂ ಏನೋಕುತೂಹಲ. "ಈ ಅಡವಿಯಲ್ಲಿ ಮರಗಿಡಗಳಿಗಿಂತ




ಅಲ್ಲಿ ಓಡಾಡುತ್ತಿರುವ ಸೈನ್ಯದ ಸಂಖ್ಯೆಯೇ ಅಪಾರವಾಗಿದೆ. ಕಣ್ಣಾರೆ ನಾನು ನೋಡಿದೆ" ಎಂದು ಒಬ್ಬ ಹೇಳಿದ.

ಅನುಚರರ ಮಾತುಗಳನ್ನು ಆಲಿಸುತ್ತಾ ವಿಜಯ ಊಟ ಮುಗಿಸಿದ. ಆಗ ರಾತ್ರಿ ಬಹಳ ಸಮಯವಾಗಿತ್ತು. ಸೈನಿಕರಲ್ಲಿ ಕೆಲವರು ನಿದ್ದೆ ಮಾಡುತ್ತಿದ್ದರು. ವಿಜಯವರ್ಮನಿಗೂ ಬಹಳ ಆಯಾಸವಾಗಿತ್ತು. ಇನ್ನು ಕೆಲವರನ್ನು ಸರದಿಪ್ರಕಾರ ಸುತ್ತಮುತ್ತಲು ಕಾವಲಿರುವಂತೆ ಏರ್ಪಾಟು ಮಾಡಿ ತಾನೂ ಮಲಗಿಕೊಂಡ ವಿಜಯವರ್ಮ.

ನಸು ಬೆಳಕಿರುವಾಗಲೇ ಆತನಿಗೆ ಎಚ್ಚರವಾಯಿತು. ಆಲಸ್ಯ ಮಾಡದೆ ಸೈನಿಕನ ಪೋಷಾಕು ಧರಿಸಿ ಸುತ್ತಮುತ್ತಲಿನ ಪರಿಸ್ಥಿತಿಯನ್ನು ಸ್ವತಃ ನೋಡ ಹೊರಟ ವಿಜಯವರ್ಮ. ಅಡವಿಪ್ರದೇಶದಲ್ಲಿ ಇನ್ನೂ ಕತ್ತಲಾವರಿಸಿತ್ತು. ಜಾಗರೂಕತೆಯಿಂದ ದಾರಿಮಾಡಿಕೊಂಡು ವಿಜಯವರ್ಮ ಗಿಡಗಳಮಧ್ಯೆ ನಡೆಯುತ್ತಿದ್ದ.

ಸ್ವಲ್ಪದೂರ ಹೋದನಂತರ ಆತನ ಕಿವಿಗಳಿಗೆ ಯಾವುದೋ ಭಾರಿ ಧ್ವನಿ ಕೇಳಿಸಿತು. ಕೂಡಲೇ ಒರೆಯಿಂದ ಕತ್ತಿಯನ್ನು ಸೆಳೆದು ಧ್ವನಿಬಂದ ದಿಕ್ಕಿನೆಡೆ ಓಡಿದ.

ಗುಬುರಾಗಿದ್ದಾ ಗಿಡಗಳನ್ನು ದಾಟಿ ವಿಶಾಲವಾದ ದಿಣ್ಣೆಯೊಂದರ ಸಮೀಪಕ್ಕೆ ಬಂದಾಗ ವಿಜಯವರ್ಮನು ಸ್ತಂಭಿತನಾದ.

ಒಬ್ಬ ವ್ಯಕ್ತಿಯನ್ನು ಐದಾರು ಜನ ಸೈನಿಕರು ಸುತ್ತು ಗಟ್ಟಿದ್ದರು. ಆ ವ್ಯಕ್ತಿ ಅವರ ಹೊಡೆತಗಳನ್ನು ತಪ್ಪಿಸಿಕೊಂಡು ಸಾಧ್ಯವಾದಾಗಲೆಲ್ಲಾ ಅವರನ್ನು ಗಾಯಗೊಳಿಸುತ್ತಿದ್ದ.

"ಬರುತ್ತಿರುವೆನು. ಭಯಪಡಬೇಡ. ನಿಲ್ಲು, ಧೈರ್ಯವಾಗಿ ಎದುರಿಸು" ಎಂದು ಕೂಗುತ್ತಾ ವಿಜಯವರ್ಮ ಆ ಸೈನಿಕರ ಹತ್ತಿರಕ್ಕೆ ಧಾವಿಸಿದ.

ಕಾದಾಟವಾಡುತ್ತಿರುವವರು ಯಾರೋ ಆತನಿಗೆ ತಿಳಿಯದು. ಆದರೆ ಒಬ್ಬನ ಮೇಲೆ ಐವರು ಕೈಮಾಡುವುದು ವಿಜಯವರ್ಮನಿಗೆ ಅಧರ್ಮವಾಗಿ ತೋರಿತು.

ನಿಸ್ಸಹಾಯಕನಾದರೂ ಧೈರ್ಯದಿಂದ ಅಷ್ಟುಮಂದಿ ಶತ್ರುಗಳಿಗೆ ಕತ್ತಿಯಿಂದ



ಜವಾಬು ಕೊಡುತ್ತಿದ್ದ ವೀರನು, ವಿಜಯವರ್ಮನ ಮಾತುಗಳಿಂದ ಮತ್ತಷ್ಟು ಹುಮ್ಮಸ್ಸುಗೊಂಡು ಒಬ್ಬೊಬ್ಬ ಸೈನಿಕನನ್ನೇ ಗಾಯಗೊಳಿಸುತ್ತಾ ಬಂದನು. ವಿಜಯವರ್ಮನೂ ಸಹ ಅಷ್ಟರಲ್ಲೇ ಸೈನಿಕರನ್ನು ಹಿಂದಿನಿಂದ ಎದುರಿಸಿದ.

ವಿಜಯವರ್ಮನು ಸಮೀಪಿಸುವ ವೇಳೆಗೆ ಒಬ್ಬ ಸೈನಿಕನು ಕೆಳಗೆಬಿದ್ದ. ಮತ್ತೊಬ್ಬ ಗಾಯಗೊಂಡು ನೋವಿನಿಂದ ನರಳುತ್ತಿದ್ದ. ವಿಜಯವರ್ಮನು ಬಂದಿರುವುದನ್ನು ನೋಡಿ ಉಳಿದ ಸೈನಿಕರು ಓಡಿದರು.

ಹಾಗೆ ಪಲಾಯನಮಾಡುತ್ತಿದ್ದ ಸೈನಿಕರಲ್ಲಿ ಒಬ್ಬನನ್ನು ವಿಜಯವರ್ಮನೂ, ಮತ್ತೊಬ್ಬನನ್ನು ಆ ವೀರನೂ ಬಲಿಹಾಕಿದರು. ಆತರುವಾಯ ಒಬ್ಬರನ್ನೊಬ್ಬರು ಆಗಲೇ ಗುರ್ತಿಸಿದಂತೆ ಎದುರುಬದುರಾಗಿ ಗಕ್ಕನೆ ನಿಂತುಬಿಟ್ಟರು.

"ಸಮಯಕ್ಕೆ ಸರಿಯಾಗಿ ಸಹಾಯ ಮಾಡಿದಿರಿ. ನೀವು ಯಾರು?" ಎಂದು ಆ ವೀರನು ವಿಜಯವರ್ಮನನ್ನು ಕೇಳಿದ. ವಿಜಯನು ಆತನ ಕಂಠಸ್ವರದ ಧೋರಣೆ ಮತ್ತು ಗಾಂಭೀರ್ಯವನ್ನು ಗ್ರಹಿಸಿ ವಿಸ್ಮಯಗೊಂಡ. ಆ ಕ್ಷಣವೇ ಆತನು ಸಾಮಾನ್ಯ ಸೈನಿಕನಲ್ಲವೆಂತಲೂ, ಸಾಕಷ್ಟು ಗಣ್ಯವ್ಯಕ್ತಿ ಎಂದೂ ವಿಜಯವರ್ಮನು ಅರಿತುಕೊಂಡ.

"ನಾನು ಬರುವುದು ತುಸ ತಡವಾಯಿತು. ಸಮಯಕ್ಕೆ ಸರಿಯಾಗಿ ನೆರವು ಕೊಡಲಿಲ್ಲವೆಂದು ಪರಿತಪಿಸುತ್ತಿರುವೆನು... ನಾನು ಬಾರದಿದ್ದರೂ ಆ ಸೈನಿಕರನ್ನೆಲ್ಲಾ ನೀವು ಸೋಲಿಸುತ್ತಿದ್ದಿರಿ" ಎಂದ ವಿಜಯವರ್ಮ.

ಆ ಮಾತುಗಳಿಗೆ ಉತ್ತರ ಕೊಡಬೇಕೆಂದಿರುವಷ್ಟರಲ್ಲಿ ಕುದುರೆಗಳ ಸಪ್ಪಳ ಕೇಳಿಸಿತು. ಸ್ವಲ್ಪ ಹೊತ್ತಿಗೆಲ್ಲಾ ನಾಲ್ಕು ಐದುನೂರು ಶೂರರು ಅಲ್ಲಿಗೆ ಬಂದರು. ಅವರ ದಳಪತಿ ಕುದುರೆಯಿಂದ ತಟಕ್ಕನೆ ಇಳಿದು ಆ ವೀರನನ್ನು ಸಮೀಪಿಸಿ, "ಪ್ರಭುಗಳ ಅಪ್ಪಣೆ ಪ್ರಕಾರ ನನ್ನ ದಳದೊಂದಿಗೆ ಬಂದಿರುತ್ತೇನೆ. ಚಂದ್ರದುರ್ಗಾಧಿಪತಿ ಸಾವಿರ ಸೈನಿಕರೊಂದಿಗೆ ಸಾಯಂಕಾಲದ ಸಮಯಕ್ಕೆ ಬರುತ್ತಾರೆ" ಎಂದು ಹೇಳಿದ.

"ಅಗೋ, ಆ ಗಿಡಗಳ ಹಿಂದೆ ನಮ್ಮ

ಡೇರೆಗಳಿವೆ. ಮೊದಲು ಏನು ಮಾಡಬೇಕೋ ಅದನ್ನು ನಿರ್ಣಯಿಸುವೆನು. ಸೈನಿಕರೆಲ್ಲರೂ ಕುದುರೆಗಳಿಂದ ಇಳಿದು ಇಲ್ಲೇ ಇರುವಂತೆ ಆಜ್ಞಾಪಿಸಿ, ನೀನೂ ಈತನೂ ಆ ಗುಡಾರ ಗಳ ಬಳಿ ಬನ್ನಿ" ಎಂದು ಹೇಳಿ ಆ ವೀರನು ಹೊರಟು ಹೋಗಿಬಿಟ್ಟನು.

ವಿಜಯವರ್ಮನಿಗೆ ಇದು ಕೌತುಕ ವನ್ನುಂಟುಮಾಡಿತು. ಸ್ವಲ್ಪ ಹೊತ್ತಿಗೆಲ್ಲಾ ಅಶ್ವದಳದ ನಾಯಕನು ತನ್ನ ಸವಾರರಿಗೆ ಸೂಕ್ತಸೂಚನೆಗಳನ್ನು ಕೊಟ್ಟು ವಿಜಯನ ಹತ್ತಿರ ಬಂದ. ಕುತೂಹಲನಾಗಿದ್ದ ವಿಜಯ ವರ್ಮನು ಆ ವೀರನು ಯಾರೆಂದು ಆ ದಳ ನಾಯಕನನ್ನು ಕೇಳಿದ.

"ಯಾರೋ ಗೊತ್ತಿಲ್ಲವೇ? ಅವರೇ ಬಿಸಲ್ಪೂರು ಪ್ರಭು!" ಎಂದ ಆ ದಳಪತಿ.

ವಿಜಯವರ್ಮನ ಆಶ್ಚರ್ಯಕ್ಕೆ ಮೇರೆಯೇ ಇಲ್ಲ. ಅನಿರೀಕ್ಷಿತವಾಗಿ ತಾನು ಬಿಸಲ್ಪೂರು ಪ್ರಭುವಿಗೆ ಸಹಾಯ ಮಾಡುವ ಸಂದರ್ಭ ವೊದಗಿದುದಕ್ಕೆ ತನ್ನನ್ನು ತಾನೇ ಅಭಿನಂದಿಸಿ ಕೊಂಡ. ಬಹಳ ಸಂತಸವಾಯಿತು ಅವನಿಗೆ.

ಭೀಮವರ್ಮ ಮತ್ತು ಸೋಮಶರ್ಮರ ರಹಸ್ಯ ತಿಳಿಯುವ ಸಮಯ ಒದಗಿ ಬಂದಿ ತೆಂದು ಉತ್ಸಾಹಗೊಂಡ ವಿಜಯವರ್ಮನು ಆ ದಳಪತಿಯೊಂದಿಗೆ ಬಿಸಲ್ಪೂರು ಪ್ರಭು ಗಳು ತಂಗಿದ್ದ ಬಿಡಾರದ ಕಡೆ ಹೊರಟ.

ಬೀಸಲ್ಪೂರು ಪ್ರಭು ವಿಜಯವರ್ಮನನ್ನು ಗೌರವಾದರಗಳಿಂದ ತನ್ನ ಗುಡಾರದೊಳಕ್ಕೆ ಆಹ್ವಾನಿಸಿ, ಅತಿಥಿ ಮರ್ಯಾದೆಯನ್ನು ಸಲ್ಲಿಸಿ ತದನಂತರ ಸಂಭಾಷಣೆಗೆ ಪ್ರಾರಂಭಿಸಿದ.

"ನಾನು ಯಾರೆಂಬುದು ನಿಮಗೆ ಈಗಾ ಗಲೇ ತಿಳಿದಿರಬಹುದು. ಇನ್ನು ನಿಮ್ಮ ವಿಷಯ ನನಗೆ ತಿಳಿಯಹೇಳಿ" ಎಂದು ಕೇಳಿದ.

"ನನ್ನ ಹೆಸರು ವಿಜಯವರ್ಮ" ಎಂದು ಅಷ್ಟೇ ಹೇಳಿದ. ಅಷ್ಟಲ್ಲದೆ ತಾನು ಹೇಳಿಕೊಳ್ಳ ಬೇಕಾದುದೇನೂ ಇರಲಿಲ್ಲ. ಏನು ತಾನೇ ಇದೆ? ತಾನೀವರೆವಿಗೂ ಯಾವ ಮಹಾ ಯುದ್ಧದಲ್ಲೂ ಭಾಗ ವಹಿಸಿಲ್ಲ. ಅದ್ಭುತ ಸಾಹಸ ಕೃತ್ಯಗಳನ್ನೂ ಮಾಡಿಲ್ಲ. ಹೆಚ್ಚಿಗೆ ಹೇಳಿಕೊಳ್ಳಲಿಕ್ಕೇನಿದೆ?

[ಮುಂದಿನ ಸಂಚಿಕೆಯಲ್ಲಿ ಮುಕ್ತಾಯ]






[ವಿಜಯವರ್ಮನು ಕೂಡಲೇ ಬೀಸಲ್ಪೂರು ಪ್ರಭುಗಳ ಪ್ರಶ್ನೆಗೆ ಉತ್ತರ ಹೇಳದೆ ತಡಬಡಿಸಿದ. ಆಗ ಆತನು ಮತ್ತೆ ಅದೇ ಪಶ್ನೆಯನ್ನು ಹಾಕಿದನು—]

"ನನ್ನ ಹೆಸರು ವಿಜಯವರ್ಮ" ಎಂದಷ್ಟು ಮಾತ್ರ ಹೇಳಿದ ವಿಜಯ.

"ನಿಮ್ಮ ವಿಚಾರ ತಿಳಿಯಬೇಕಾದುದು ಇಷ್ಟೇಯೇ?" ಎಂದು ಪ್ರಶ್ನೆಮಾಡಿದರು ಬೀಸಲ್ಪೂರು ಪ್ರಭುಗಳು. ತರುವಾಯ ತಲೆ ದೂಗುತ್ತಾ ಹೀಗೆಂದರು:

"ನೀವು ಯಾವ ಪಕ್ಷಕ್ಕೆ ಸೇರಿದವರು— ಬೀಸಲ್ಪೂರೊ, ಕೋಸಲ್ಪೂರೊ?"

"ನಾನು ಬೀಸಲ್ಪೂರು ಪಕ್ಷದವನು" ಗಂಭೀರ ಸ್ವರದಿಂದ ನುಡಿದ ವಿಜಯ.

"ಈ ಮಾತು ನಂಬಲರ್ಹವಾದುದೇ?" ಎಂದು ಅನುಮಾನ ಸೂಚಿಸುತ್ತಾ ನುಡಿದರು ಬೀಸಲ್ಪೂರು ಪ್ರಭುಗಳು. ಆದರೆ ಮರುಕ್ಷಣದಲ್ಲೇ ನಸುನಗೆ ಬೀರುತ್ತಾ "ನಿಮ್ಮ ಮೇಲೆ ಅನುಮಾನ ಸೂಚಿಸಿದೆನೆಂದು ಏನೂ ಭಾವಿಸಬೇಡಿ. ಇಂದಿನ ಪರಿಸ್ಥಿತಿಯಲ್ಲಿ ಯಾರು, ಯಾವಾಗ, ಹೇಗೆ ಬದಲಾಯಿಸುವರೋ ಹೇಳುವಂತಿಲ್ಲ" ಎಂದರು.

ತನ್ನ ಮಾತನ್ನು ಅನುಮಾನಿಸಿದುದರಿಂದ ವಿಜಯವರ್ಮನಿಗೆ ತುಸ ಕೋಪ ಬಂತು. ಆತನೆಂದ "ನಾನು ಚಂದ್ರದುರ್ಗಾಧಿಪತಿಯನ್ನು ಚೆನ್ನಾಗಿ ಬಲ್ಲೆ. ನನ್ನ ವಿಷಯ ಅವರಿಗೆ ಚೆನ್ನಾಗಿ ತಿಳಿದಿದೆ"

ಚಂದ್ರದುರ್ಗಾಧಿಪತಿಯ ಹೆಸರು ಕಿವಿಗೆ ಬಿದ್ದಕೂಡಲೇ ಬೀಸಲ್ಪೂರು ಪ್ರಭುಗಳ ಮುಖ ಪ್ರಸನ್ನವಾಯಿತು.

"ಸರಿ, ನಿಮ್ಮನ್ನು ಕುರಿತು ನನಗೆ ಮತ್ತೆ ಯಾವ ಸಂಶಯವೂ ಇಲ್ಲ. ಈಗಿರುವ ಸೈನ್ಯ



ದಿಂದಲೇ ದೇವಪುರವನ್ನು ಜಯಿಸಬಲ್ಲೆನೆಂದು ನಾನು ತಿಳಿದಿದ್ದೇನೆ. ಆದರೆ ಬಹಳದಿನಗಳಿಂದ ಇತ್ತಕಡೆಯೇ ಇರುವಿರಾದುದರಿಂದ ನಿಮ್ಮ ಅಭಿಪ್ರಾಯವನ್ನು ಕೇಳುವೆನು. ಮುಚ್ಚು ಮರೆಯಿಲ್ಲದೆ ಹೇಳಿ"

ಕ್ಷಣಕಾಲ ಆಲೋಚಿಸಿದ ವಿಜಯವರ್ಮ.

"ನಮ್ಮ ಸೈನ್ಯದ ಬಲ ಎಷ್ಟಿರುವುದೋ ತಿಳಿದರೆ ನಾನು ನಿಮಗೆ ಸೂಕ್ತ ಸಲಹೆ ಕೊಡ ಬಲ್ಲೆ" ಎಂದ.

"ನನ್ನ ಸಂಗಡ ಸವಾರರ ದಳ, ಪದಾತಿ ಸೈನ್ಯ ಎಲ್ಲಾ ಸೇರಿ ಸುಮಾರು ಎಂಟುನೂರು ಇರುತ್ತಾರೆ. ಸಾಯಂಕಾಲದ ಸಮಯಕ್ಕೆ ಸುಮಾರು ಸಾವಿರ ಸೈನಿಕರೊಂದಿಗೆ ಚಂದ್ರ ದುರ್ಗಾಧಿಪತಿ ನಮ್ಮ ಸಹಾಯಕ್ಕೆ ಬರುವವರಿದ್ದಾರೆ. ಖಂಡಿತ ಬರುವರು" ಎಂದರು ಬೀಸಲ್ಪೂರು ಪ್ರಭುಗಳು.

"ಹಾಗಿದ್ದ ಪಕ್ಷಕ್ಕೆ ನಾವು ದೇವಪುರವನ್ನು ಸಂಪೂರ್ಣವಾಗಿ ಜಯಿಸಲಾರೆವಾದರೂ ಶತ್ರುಗಳನ್ನು ಸದೆಬಡಿಯಬಹುದು" ಎಂದ ವಿಜಯವರ್ಮ.

"ಹಾಗಾದರೆ ನಿಮ್ಮ ವ್ಯೂಹವೇನು?" ಎಂದು ಕೇಳಿದರು ಬೀಸಲ್ಪೂರು ಪ್ರಭು.

"ನಾವು ಎಷ್ಟು ಹಠಾತ್ತನೆ ದೇವಪುರದ ಮೇಲೆ ಧಾಳಿ ನಡೆಸಿದರೆ ಜಯವು ನಮಗೆ ಅಷ್ಟು ಸುಲಭವಾಗಿ ಲಭಿಸುತ್ತದೆ. ದೇವ ಪುರಕ್ಕೂ, ಈ ಅಡವಿಗೂ ಮಧ್ಯೆ ಇರುವ ಒಂದು ಮೈಲು ಬಯಲು ಪ್ರದೇಶವನ್ನು ಶತ್ರುಗಳಿಗೆ ತಿಳಿಯದಂತೆ ನಾವು ದಾಟಿಬಿಟ್ಟರೆ ಅವರನ್ನು ನಿರಾಯುಧರಾಗಿಯೇ ನುಚ್ಚು ನೂರು ಮಾಡಬಹುದು" ಎಂದ ವಿಜಯ.

"ಸರಿ, ಧಾಳಿಗೆ ಏರ್ಪಾಟುಮಾಡಿ. ಈ ಸುತ್ತಮುತ್ತಲಿನ ಪ್ರದೇಶಗಳನ್ನು ಚೆನ್ನಾಗಿ ಅರಿತಿರುವಿರಾದುದರಿಂದ ನಿಮಗೆ ಈ ಕಾರ್ಯ ವನ್ನು ವಹಿಸುತ್ತಿದ್ದೇನೆ" ಎಂದು ಹೇಳಿ ಬೀಸಲ್ಪೂರು ಪ್ರಭುಗಳು ಗುಡಾರದಿಂದ ಹೊರಕ್ಕೆ ಬಂದರು.

ವಿಜಯವರ್ಮನ ಆಜ್ಞೆಯ ಮೇರೆಗೆ ಬೀಸಲ್ಪೂರು ಅಶ್ವದಳ ಮುಂದೆ ಹೊರಟಿತು. ಹಿಂದೆ ಸಾಲುಸಾಲಾಗಿ ಪದಾತಿಸೈನ್ಯ ನಡೆಯು ತಿತ್ತು. ವಿಜಯವರ್ಮ ಮತ್ತು ಬೀಸಲ್ಪೂರು ಪ್ರಭುಗಳು ಎರಡು ಉತ್ತಮಾಶ್ವಗಳನ್ನೇರಿ




ಸೈನ್ಯದಮುಂದೆ ಹೊರಟರು. ಸ್ವಲ್ಪಹೊತ್ತಿಗೆಲ್ಲಾ ಆ ಸೈನ್ಯವು ದೇವಪುರದ ಕಡೆಯ ಅಡವಿಯ ಅಂಚಿಗೆ ಬಂದರು.

ಬೀಸಲ್ಪೂರು ಅರಸನೊಂದಿಗೆ ವಿಜಯವರ್ಮನು ಸಮಾಲೋಚನೆ ಮಾಡಿದ. ಮೊದಲು ಅಶ್ವದಳ ಶರವೇಗದಿಂದ ಹೊರಟು ಆ ಬಯಲು ಪ್ರದೇಶವನ್ನು ದಾಟಿ ಸುತ್ತಮುತ್ತಲಿರುವ ದೇವಪುರದ ಗಡಿಯನ್ನು ಆಕ್ರಮಿಸಬೇಕು. ಹಿಂದೆ ಇರುವ ಪದಾತಿ ಸೈನ್ಯ ಬಂದು ಸೇರಿದ ತರುವಾಯ ಒಮ್ಮೆಗೇ ಮುನ್ನುಗ್ಗಬಹುದು.

ಬೀಸಲ್ಪೂರು ಅರಸರು ಅಜ್ಞೆಯಿತ್ತರು. ಅಶ್ವದಳವೆಲ್ಲಾ ಅಡವಿಯಿಂದ ಹೊರಬಂದು ಶರವೇಗದಿಂದ ದೇವಪುರದ ಕಡೆ ಓಡಿತು. ಅದೇ ಸಮಯಕ್ಕೆ ದೇವಪುರದಿಂದ ಗಂಟೆಗಳ ನಿನಾದ ಕೇಳಿಬಂತು. ಕೋಟೆಯಲ್ಲಿರುವವರಿಗೆ ಎಚ್ಚರಿಕೆ ಸೂಚಿಸಲು ತಮಟೆ, ನಗಾರಿಗಳು ಭಯಂಕರವಾಗಿ ಮೊಳಗಿದವು.

"ನಮ್ಮ ಬರುವಿಕೆಯನ್ನು ಕಂಡುಕೊಂಡರು. ಆದರೂ ಪರವಾಯಿಲ್ಲ. ಮುಂದೆ ಕಾಣಿಸುವ ಗಡಿ ಪ್ರದೇಶದಲ್ಲಿರುವ ಮನೆಗಳನ್ನು ಆಕ್ರಮಿಸಿಕೊಂಡರೆ ಅವುಗಳನ್ನು ರಕ್ಷಣೆಯ ಸ್ಥಳಗಳನ್ನಾಗಿಟ್ಟುಕೊಂಡು ಶತ್ರುಗಳನ್ನು ತಡೆಯಬಹುದು" ಎಂದನು ವಿಜಯವರ್ಮ.

"ಸೊಗಸಾದ ಆಲೋಚನೆ. ನಾವು ಪಟ್ಟಣವನ್ನು ಆಕ್ರಮಿಸಿಕೊಳ್ಳಲಾರದೆ ಹೋದರೂ ಕಡೇಪಕ್ಷ ಕಾಲಿಟ್ಟರೆ ಸಾಕು. ಸಾಯಂಕಾಲಕ್ಕೆಲ್ಲಾ ಚಂದ್ರದುರ್ಗಾಧಿಪತಿ ತನ್ನ ಸೈನ್ಯದೊಂದಿಗೆ ಸಹಾಯಕ್ಕೆ ಬರುತ್ತಾನೆ. ಆಗ ಶತ್ರುಸೈನ್ಯವನ್ನು ಸದೆಬಡಿಯಬಹುದು" ಎಂದರು ಬಿಸಲ್ಪೂರು ಪ್ರಭು.

ಬೀಸಲ್ಪೂರು ಅಶ್ವದಳ ದೇವಪುರದ ಗಡಿಯನ್ನು ಸಮೀಪಿಸಿತು. ವಿಜಯವರ್ಮನ ಹಂಚಿಕೆ ಕೊಂಚಮಟ್ಟಿಗೆ ಫಲಿಸಿದಂತೆ ತೋರಿ ಉತ್ಸಾಹವಾಯಿತು.

ಹಠಾತ್ತನೆ ಬಂದ ಧಾಳಿಯನ್ನು ಎದುರಿಸಲು ಭೀಮವರ್ಮನ ಸೈನಿಕರು ಸಿದ್ಧರಿರಲಿಲ್ಲ. ನಾಲ್ಕೈದು ಜನರಂತೆ ಬಂದು ಬೀಸಲ್ಪೂರು ಸೈನ್ಯವನ್ನು ಎದುರಿಸಲು ಪ್ರಯತ್ನಮಾಡಿದರು. ಆದರೆ ಅವರೆಲ್ಲಾ ಬೀಸಲ್ಪೂರು ಪಕ್ಷದವರ ಭರ್ಚಿಗೆ ತುತ್ತಾದರು. ಕೋಟೆಯ



ಒಳಭಾಗದಲ್ಲಿ ನಗಾರಿಗಳ ಸಪ್ಪಳವೂ, ಸೈನಿಕರ ಕೂಗಾಟಗಳ ಕೋಲಾಹಲವೂ ಬಹಳ ಜೋರಾಗಿ ಕೇಳಿದುವು.

ಭೀಮವರ್ಮನು ತನ್ನ ಸೈನಿಕರನ್ನೆಲ್ಲಾ ಪ್ರತಿಧಾಳಿಗಾಗಿ ಒಟ್ಟುಗೂಡಿಸುತ್ತಿರುವಂತೆ ತೋರಿತು. ನಾಲ್ಕು ರಸ್ತೆಗಳು ಸಂಧಿಸುವ ಸ್ಥಳಗಳನ್ನು ಆಕ್ರಮಿಸಿಕೊಂಡು, ವಿಜಯವರ್ಮನು ಸೈನಿಕರನ್ನೂ ರಾಹುತರನ್ನೂ ನಾಲ್ಕು ಭಾಗಗಳಾಗಿ ವಿಂಗಡಿಸಿದನು. ಆ ಭಾಗಗಳನ್ನೂ ನಾಲ್ಕು ರಸ್ತೆಗಳ ಮುಂಭಾಗ ಮತ್ತು ಹಿಂಭಾಗಗಳಲ್ಲಿ ಇಟ್ಟು ಶತ್ರುವನ್ನು ಪ್ರತಿಭಟಿಸಲು ಯತ್ನಿಸಿದನು.

ಸೈನಿಕರು ರಸ್ತೆಗಳಲ್ಲಿದ್ದ ಮನೆಬಾಗಿಲುಗಳನ್ನು ಒಡೆದು, ಮನೆಯಲ್ಲಿದ್ದ ಸಾಮಾನುಗಳನ್ನೆಲ್ಲಾ ತಂದು ಬೀದಿಯ ಕೊನೆಗಳಲ್ಲಿ ರಾಸಿ ಹಾಕಿದರು. ಕುರ್ಚಿ, ಮಂಚ, ಬಾಗಿಲು ಯಾವುದು ಸಿಕ್ಕಿದರೆ ಅದನ್ನು ತಂದು ಬೀದಿಯ ಕೊನೆಗಳಲ್ಲಿ ಎತ್ತರವಾಗಿ ಸೇರಿಸಿದರು. ಅವುಗಳ ಹಿಂದೆ ಧನುರ್ಬಾಣಗಳನ್ನು ಹಿಡಿದ ಪದಾತಿ ಸೈನ್ಯವೂ, ಅವರಿಗಿಂತಲೂ ಕೊಂಚ ಹಿಂದೆ ಭರ್ಚಿ ಭಲ್ಲೆಗಳನ್ನು ಹಿಡಿದು ಸಿದ್ಧರಾಗಿದ್ದ ರಾಹುತರೂ ನಿಂತರು.

ಕೊಂಚ ಹೊತ್ತಿಗೆಲ್ಲಾ ಭೀಮವರ್ಮ ತನ್ನ ಸೈನ್ಯದೊಂದಿಗೆ ಪ್ರತಿಧಾಳಿ ಪ್ರಾರಂಭಿಸಿದ.

ನಾಲ್ಕು ರಸ್ತೆಗಳು ಕೂಡುವ ಸ್ಥಳದ ಕಡೆಯಿಂದ ದೇವಪುರ ಜಮೀನುದಾರನ ನಾಯಕತ್ವದಲ್ಲಿದ್ದ ಸೈನಿಕರೂ, ಬೀದಿಯ ಕೊನೆಗಳ ಕಡೆಯಿಂದ ಭೀಮವರ್ಮ, ಆತನ ಅನುಚರರ ನಾಯಕತ್ವದಲ್ಲಿದ್ದ ಸೈನಿಕರೂ ಎಡೆಬಿಡದೆ ಬಾಣಗಳ ಮಳೆ ಸುರಿಸಿದರು.

ಅಲ್ಲಿ ಎದುರುಧಾಳಿ ನಡೆಸುತ್ತಿದ್ದಾತನು ಬೀಮವರ್ಮನೆಂದು ವಿಜಯನು ಗ್ರಹಿಸಿದ. ಕವಚವನ್ನು ಧರಿಸಿ, ಕತ್ತಿಯನ್ನು ಝಳಪಿಸುತ್ತಾ ಭೀಮವರ್ಮನು ತನ್ನ ಸೈನಿಕರನ್ನು ಹುರಿದುಂಬಿಸುತ್ತಿದ್ದನು. ವಿಜಯವರ್ಮನು ಆತನ ಕಣ್ಣಿಗೆ ಬಿದ್ದಕೂಡಲೇ,

"ರಾಂಸಿಂಗ್, ಅದೋ ನಮ್ಮ ಕಡು ವೈರಿ ವಿಜಯವರ್ಮ. ಆತನನ್ನು ಈಸಾರಿ ಪ್ರಾಣದೊಂದಿಗೆ ಬಿಡಕೂಡದು. ಜೀವ ಸಹಿತ ಬಂಧಿಸಿದರೂ ಸರಿ, ತಲೆಕಡಿದು ತಂದರೂ ಸರಿ, ಎಲ್ಲಾ ನಿನಗೇ ಬಿಟ್ಟಿದ್ದೇನೆ. ಊಂ,

ಮುಂದಕ್ಕೆ ಸಾಗಿರಿ..." ಭೀಮವರ್ಮನೆಂದ. ರಾಂಸಿಂಗನ ಹೆಸರು ಕೇಳಿ ವಿಜಯವರ್ಮನು ನಿಶ್ಚಿಂತನಾದ.

ಹಿಂದೆ ಅವರಿಬ್ಬರೂ ಗೆಳೆಯರಾಗಿದ್ದರು. ಶಬ್ದವೇಧಿ ಮುದಿ ಗಂಗುವನ್ನು ಬಾಣದಿಂದ ಕೊಂದಾಗ ಅದಕ್ಕೆ ಕಟ್ಟಿದ್ದ ಪತ್ರದಲ್ಲಿ ರಾಂಸಿಂಗನು ಸೋಂನಗರ ಸುಟ್ಟಂತೆ ಬರೆದಿತ್ತು. ಅಂದಿನಿಂದ ಕ್ರಮೇಣ ಅವರು ಪ್ರಬಲ ಶತ್ರುಗಳಾಗಿ ಪರಿಣಮಿಸಿದರು.

ಏನೇ ಇರಲಿ, ಇಂದಿಗೆ ಸೇಡು ತೀರಿಸಿಕೊಳ್ಳುವ ಅವಕಾಶ ಲಭಿಸಿತೆಂದು ವಿಜಯವರ್ಮನು ತುಂಬಾ ಉತ್ಸಾಹದಿಂದಿದ್ದ.

ಇಷ್ಟರಲ್ಲಿ ಬೀದಿಗಡ್ಡಲಾಗಿ ಸೇರಿಸಿದ್ದ ಆತಂಕಗಳನ್ನು ಬೇಧಿಸಿ ರಾಂಸಿಂಗನು ಒಂದು ಕಡೆಯಿಂದ ಒಳನುಗ್ಗಿದ. ರಾಂಸಿಂಗನೊಂದಿಗೆ ಯುದ್ಧಮಾಡಲು ಕಾತುರನಾಗಿದ್ದ ವಿಜಯವರ್ಮನು ಮುಂದಕ್ಕೆ ಹಾರಿ ಆತನೊಂದಿಗೆ ಕತ್ತಿಯುದ್ಧಕ್ಕೆ ನಿಂತ.

ವಿಜಯಲಕ್ಷ್ಮಿ ಯಾರನ್ನು ವರಿಸುವಳೆಂದು ಕೆಲವಾರು ನಿಮಿಷ ಹೋರಾಟ ನಡೆಯುವಷ್ಟರಲ್ಲಿ ತಿಳಿದುಬಿಟ್ಟಿತು. ಆಯಾಸಗೊಂಡ ರಾಂಸಿಂಗನು ಒಂದೊಂದು ಹೆಜ್ಜೆ ಹಿಂದಿಡುತ್ತಾ ತನ್ನ ಸೈನ್ಯವಿರುವಕಡೆ ಹೋಗಲು ಪ್ರಾರಂಭಿಸಿದನು. ಆಗ ಅಪರಿಮಿತ ಉತ್ಸಾಹದಿಂದ ಪೌರುಷದಿಂದ ವಿಜಯವರ್ಮನು ಬಿರುಸಾಗಿ ಕತ್ತಿಯನ್ನು ಬೀಸುತ್ತಿದ್ದ. ಕಾಳಗ ಕಡಿವಾಯಿತು. ಬೀದಿಗಡ್ಡಲಾಗಿ ಹಾಕಿದ್ದರಕ್ಷಣೆಗಳನ್ನು




ಸಮೀಪಿಸಲು, ಚಲ್ಲಾಪಿಲ್ಲಿಯಾಗಿದ್ದ ಮಂಚಗಳೂ, ಕುರ್ಚಿಗಳೂ ಕಾದಾಡುತ್ತಿರುವವರ ಕಾಲುಗಳಿಗೆ ತಗಲುತ್ತಿದ್ದವು. ಆಗೊಮ್ಮೆ ಈಗೊಮ್ಮೆ ಕಾಲುಜಾರಿ ಬೀಳುತ್ತಿದ್ದರು.

ರಾಂಸಿಂಗನು ಹಾಗೊಮ್ಮೆ ಕಾಲುಜಾರಿ ಬೀಳುವುದೂ, ವಿಜಯವರ್ಮನ ಖಡ್ಗ ಮಿಂಚು ಹೊಡೆದಂತೆ ಆತನ ಶಿರವನ್ನು ಛೇದಿಸುವುದೂ ಕ್ಷಣಮಾತ್ರದಲ್ಲಿ ನಡೆದುಬಿಟ್ಟಿತು. ಸೈನಿಕರಲ್ಲಿ ಬಹಳ ಕೋಲಾಹಲವಾಯಿತು.

ಈ ದೃಶ್ಯವನ್ನು ಕಂಡು ಬೀಸಲ್ಪೂರು ಸೈನ್ಯ ಜಯಜಯಕಾರ ಮಾಡಿದರು. ಭೀಮವರ್ಮನ ಸೈನಿಕರು ಭೀತಿಯಿಂದ ಹಿಂದಕ್ಕೆ ಓಡತೊಡಗಿದರು. ಭೀಮವರ್ಮನ ಆಜ್ಞೆಗಳಿಗಾಗಲೀ, ಹುರುಪಿನ ಮಾತುಗಳಿಗಾಗಲೀ




ಬೆನ್ನು ತೋರಿಸಿ ಓಡುತ್ತಿದ್ದ ಸೈನಿಕರನ್ನು ನಿಲ್ಲಿಸಿ ಮತ್ತೆ ಯುದ್ಧ ಮಾಡಿಸುವ ಶಕ್ತಿಸ್ವಲ್ಪವೂ ಇಲ್ಲದಾಯಿತು. ಎಲ್ಲರೂ ಓಡುವವರೇ.

"ನಿನ್ನ ಸಾಹಸ ಕಂಡು ತುಂಬಾ ಸಂತೋಷವಾಗಿದೆ. ಭೀಮವರ್ಮನ ಸೈನಿಕರು ಭೀತಿಯಿಂದ ಓಡುತ್ತಿದ್ದಾರೆ. ಈಗ ನಾವು ನರ್ಮದಾ ತೀರದಲ್ಲಿರುವ ಅವರ ಮುಖ್ಯ ಭವನವನ್ನುಸಹ ಮುತ್ತಿದರೆ ಜಯಶೀಲರಾಗ ಬಹುದೆಂದು ತೋರುತ್ತಿದೆ. ನಿಮ್ಮ ಅಭಿಪ್ರಾಯವೇನು?" ಎಂದು ಜೀಸಲ್ಪೂರು ಅರಸರು ಕೇಳಿದರು.

ವಿಜಯವರ್ಮನು ಕೂಡಲೇ ಈ ಸಲಹೆಯನ್ನು ಅಂಗೀಕರಿಸಿದನು. ನರ್ಮದಾನದಿ ತೀರದಲ್ಲಿರುವ ಭವನದಲ್ಲಿ ಕರುಣ ಬಂಧಿತಳಾಗಿದ್ದಾಳೆ. ಆಕೆಯನ್ನು ಆದಷ್ಟು ಬೇಗ ವಿಮುಕ್ತಳನ್ನಾಗಿ ಮಾಡುವುದು ಉತ್ತಮ ಎಂದು ವಿಜಯವರ್ಮನು ಯೋಚಿಸಿದ.

ಆ ಭವನವನ್ನು ಹಿಡಿಯಲು ಭಾರಿ ಹೋರಾಟ ನಡೆಯಬಹುದೆಂದು ಎಣಿಸಿದ್ದ ವಿಜಯನಿಗೆ ನಿರಾಶೆ ಆಯಿತು!

ಭವನದ ಮುಖ್ಯದ್ವಾರದ ಹತ್ತಿರ ಎದುರು ಬಿದ್ದ ಕೆಲವು ಸೈನಿಕರನ್ನೂ, ಒಳಗಡೆ ತಮ್ಮನ್ನು ಎದುರಿಸಿದ ಕೆಲವು ಜನರನ್ನೂ ಕ್ಷಣಮಾತ್ರದಲ್ಲಿ ಕೊಂದುಹಾಕಿದರು ವಿಜಯವರ್ಮನ ಪರಿವಾರ. ವಿಜಯನು ವೇಗವಾಗಿ ಒಳನುಗ್ಗಿ ತನ್ನ ಸೈನಿಕರ ಸಹಾಯದಿಂದ ಕರುಣಳಿಗಾಗಿ ಪ್ರತಿ ಕೋಣೆಯಲ್ಲೂ ಹುಡುಕಿದ. ಆದರೆ ಕರುಣ ಕಾಣಿಸಲಿಲ್ಲ.

ನಿರಾಶೆಯಿಂದ ಆತನು ಭವನದ ಮೆಟ್ಟಲುಗಳನ್ನು ಇಳಿದು ಬರುತ್ತಿರುವಾಗ ಆತನಿಗೊಂದು ಯೋಚನೆ ಹೊಳೆಯಿತು. ಸರಸರನೆಂದು ತುದಿಯ ಮೆಟ್ಟಲುವರೆವಿಗೂ ಏರಿ, ಒಂದು ಮೂಲೆಯಲ್ಲಿದ್ದ ಬುರುಜುನಿಂದ ಅಡವಿಯ ಕಡೆ ನೋಡಿದ.

ನಲವತ್ತು-ಐವತ್ತು ಸವಾರರು, ಕೊಂಚ ಕಾಲ್ಬಲ ಅಡವಿಯ ಕಡೆ ನಾಗಾಲೋಟದಿಂದ ಓಡುತ್ತಿರುವುದು ಕಾಣಿಸಿತು. ಅವರು ಭೀಮವರ್ಮನಕಡೆಯವರೇ ಇರಬೇಕೆಂತಲೂ, ಕರುಣಳನ್ನು ಬಂಧಿಸಿ ಕರೆದುಕೊಂಡು ಹೋಗುತ್ತಿರಬಹುದೆಂದೂ ವಿಜಯವರ್ಮನು ಗ್ರಹಿಸಿದ. ತತ್‌ಕ್ಷಣ ತನ್ನ ಸೈನಿಕರನ್ನು



ಕರೆದುಕೊಂಡು ಅವರನ್ನು ಬೆನ್ನಟ್ಟಿದ. ತುಸ ಹೊತ್ತಿಗೆಲ್ಲಾ ಅವರೂ ಅಡವಿಯನ್ನು ಸಮೀಪಿಸಿದರು. ವಿಜಯವರ್ಮನು ತನ್ನ ಸೈನಿಕರಿಗೆ ಸಲಹೆಗಳನ್ನು ಕೊಟ್ಟು ಅವರೊಂದಿಗೆ ಒಳಗೆ ನುಗ್ಗಿದನು. ಮರುಕ್ಷಣವೇ ಸನಿಯದಯಲ್ಲೇ ಭಾರಿ ಕಾಳಗವಾಗುತ್ತಿರುವ ಕೋಲಾಹಲದ ಶಬ್ದವು ಆತನಿಗೆ ಕೇಳಿಸಿತು.

ಈ ಗಲಭೆ ಅಡವಿಯಲ್ಲಿದ್ದ ದೇವಾಲಯ ಪ್ರದೇಶದಿಂದ ಬರುತ್ತಿರುವಂತೆ ವಿಜಯನು ಗ್ರಹಿಸಿದ. ಸೈನಿಕರನ್ನು ಅತ್ತ ಕಡೆ ಹೋಗುವಂತೆ ಆಜ್ಞಾಪಿಸುತ್ತಿರಲಾಗಿ, ಇದ್ದಕ್ಕಿದ್ದಹಾಗೆ ಒಂದು ಮರದ ಮೇಲಿಂದ ಅಂಬಿಗ ಅಣ್ಣಯ್ಯ ದಢಾರನೆ ಕೆಳಗೆ ಧುಮಿಕಿದ.

"ವಿಜಯ, ಇದೇ ನಮಗೆ ಸಮಯ. ಭೀಮವರ್ಮನೊಂದಿಗೆ ಚಂಡಿದಾಸನು ಸ್ವತಃ ಹೋರಾಟಕ್ಕೆ ನಿಂತಿದ್ದಾನೆ. ತಡಮಾಡಬಾರದು ನಡೆ ಬೇಗ" ಎಂದ.

ವಿಜಯವರ್ಮನು ಆ ಪ್ರದೇಶಕ್ಕೆ ಹೋಗುವಷ್ಟರಲ್ಲಿ ಯುದ್ಧ ಮುಗಿದುಹೋಗಿತ್ತು. ಚಂಡಿದಾಸನು ಓಡಿಹೋಗುತ್ತಿದ್ದ ಭೀಮವರ್ಮನ ಪರಿವಾರದವರನ್ನು ಸದೆಬಡಿಯಲು ತನ್ನ ಅನುಚರನ್ನು ಹುರಿದುಂಬಿಸುತ್ತಿದ್ದಾನೆ. ಚಂಡಿದಾಸನನ್ನು ಕಂಡಕೂಡಲೇ ವಿಜಯವರ್ಮನು ಆತುರದಿಂದ—

"ಕರುಣ ಎಲ್ಲಿ? ಭೀಮವರ್ಮ ಸೋಮಶರ್ಮರು ಓಡಿಹೋದರೆ?" ಎಂದು ದುಗುಡದಿಂದ ಕೇಳಿದ. ಅದಕ್ಕೆ ಚಂಡಿದಾಸನು ನಗುತ್ತಾ "ಕರುಣ ಇಲ್ಲೇ ಇರುವಳು. ಭೀಮವರ್ಮ ಸೋಮಶರ್ಮರು ತಮ್ಮ ಮಕ್ಕಳನ್ನು ನೆನೆಸುತ್ತಾ ಪ್ರಾಣಗಳನ್ನು ತ್ಯಜಿಸಿದರು! ಕತ್ತಿಯ ಏಟಿಗೆ ಬಲಿಯಾದ ಭೀಮವರ್ಮ, ಬಾಣದ ಹೊಡೆತಕ್ಕೆ ಗುರಿಯಾದ ಸೋಮಶರ್ಮ ಇಲ್ಲೇ ಇದ್ದಾರೆ. ಆದರೆ ಸೋಂನಗರವನ್ನು ಅಗ್ನಿಗರ್ಪಿಸಿದ ದುರುಳ ರಾಂಸಿಂಗ್ ತಪ್ಪಿಸಿಕೊಂಡ" ಎಂದ.

"ರಾಂಸಿಂಗ್ ತಪ್ಪಿಸಿಕೊಳ್ಳಲಿಲ್ಲ. ಈಮೊದಲೇ ನಾನು ಅವನ ಕಥೆ ಮುಗಿಸಿದೆ" ಎಂದ ವಿಜಯ. ಈ ಮಾತುಗಳನ್ನು ಕೇಳಿ ಚಂಡಿದಾಸನು ಪರಮಾನಂದಗೊಂಡ.

"ಹಾಗೆಂದರೆ ಶತ್ರುಶೇಷವಿಲ್ಲವೆಂದಾಯಿತು. ನಿನ್ನ ತಂದೆ ಅಭಯವರ್ಮನನ್ನು

ಚಿತ್ರಹಿಂಸೆಗೆ ಗುರಿಮಾಡಿ ಸಾಯಿಸಿದ ಹಂತಕರಿಗೆ ತಕ್ಕ ಶಾಸ್ತಿ ನಡೆಯಿತು. ನನ್ನ ಕೋರಿಕೆ ನೆರವೇರಿತು. ಇನ್ನು ಉಳಿದಿರುವುದೆಂದರೆ ಕರುಣಳೊಂದಿಗೆ ನಿನ್ನ ವಿವಾಹ. ಅದು ಈ ದೇವಾಲಯದಲ್ಲೇ ನಡೆಯಲಿ."

ಅಲ್ಲೇ ಆ ನಿಮಿಷವೇ ಕರುಣಳೊಂದಿಗೆ ವಿಜಯವರ್ಮನ ವಿವಾಹವಾಯಿತು. ಆಯುಧಗಳನ್ನು ಧರಿಸಿದ್ದ ಚಂಡಿದಾಸನ ಅನುಚರರು ಮತ್ತು ಮದುವೆಯ ಮುಖಂಡರು ಅತಿಥಿಗಳಾದರು!

ಎಲ್ಲರ ಮುಖಗಳಲ್ಲೂ ಆನಂದ ತುಳುಕಾಡುತಿತ್ತು. ಚಂಡಿದಾಸನು ಹೀಗೆಂದ:

"ಇನ್ನು ನಾವು ಸೋಂನಗರಕ್ಕೆ ಹೊರಡೋಣ. ಆ ಪ್ರಾಂತ್ಯವೆಲ್ಲಾ ನಿನ್ನ ತಂದೆಯವರದಾಗಿತ್ತು. ಸೋಮಶರ್ಮನಿಂದ ಸರ್ವನಾಶ ಮಾಡಲ್ಪಟ್ಟ ಆ ನಗರವನ್ನು ಮತ್ತೆ ಕಟ್ಟೋಣ. ಇನ್ನು ನಮ್ಮ ಬಾಳನ್ನು ಶಾಂತವಾಗಿ ಕಳೆಯೋಣ."

"ಹಾಗಾದರೆ ನಾವು ಚಂದ್ರದುರ್ಗಾಧಿಪತಿಯನ್ನು ಭೇಟಿಮಾಡುವುದು ಯಾವಾಗ? ಅವರು ಕರುಣಳ ಸಾಕು ತಂದೆಯಷ್ಟೆ" ಎಂದ ವಿಜಯವರ್ಮ. ಕೌತುಕವಿತ್ತು ಆ ಮಾತುಗಳಲ್ಲಿ.

"ಚಂದ್ರದುರ್ಗಾಧಿಪತಿಯನ್ನು ಭೇಟಿಮಾಡೋಣ. ವಿವಾಹ ವಿಷಯ ನಾನು ಅವರಿಗೆ ತಿಳಿಸುವ ಏರ್ಪಾಟು ಮಾಡುತ್ತೇನೆ. ಮೊದಲು ಸೋಂನಗರಕ್ಕೆ ಹೊರಡಬೇಕು".

"ಹಾಗಾದರೆ ನಾನೂ ಸೋಂನಗರಕ್ಕೆ ಬರುತ್ತೇನೆ. ನನ್ನ ರಹಸ್ಯ ಗೃಹವನ್ನು ತ್ಯಜಿಸುವೆನು" ಎಂದ ಅಂಬಿಗ ಅಣ್ಣಯ್ಯ.

ಅಣ್ಣಯ್ಯನ ಮಾತುಗಳನ್ನು ಕೇಳಿ ಎಲ್ಲರೂ ಗೊಳ್ಳೆಂದು ನಕ್ಕರು. ವಿಜಯವರ್ಮ ಕರುಣರ ಎರಡು ಮಗ್ಗುಲಲ್ಲೂ ಚಂಡೀದಾಸ ಅಣ್ಣಯ್ಯರೂ, ಅವರ ಹಿಂದೆ ಜಯಕಾರ ಮಾಡುತ್ತಿದ್ದ ಸೈನಿಕರೂ ಸೋಂನಗರದ ಕಡೆಗೆ ನಡೆದರು. ['ಶಬ್ದವೇಧಿ' ಮುಗಿಯಿತು]

